ಚುನಾವಣೆ ೨೦೦೮

# ಜನತೆಯ ಪ್ರಣಾಳಿಕೆ



ಪ್ರಜಾಪ್ರಭುತ್ವಕ್ಕಾಗಿ ಜನರ ಒಕ್ಕೂಟ

Library

# ಜನತೆಯ ಪ್ರಣಾಳಿಕೆ

ಪ್ರಕಾಶಕರು:
**ಪ್ರಜಾಪ್ರಭುತ್ವಕ್ಕಾಗಿ ಜನರ ಒಕ್ಕೂಟ**
ಕೆ.ಎಲ್.ಅಶೋಕ, ದುರ್ಗಾನಿಲಯ,
2ನೇ ತಿರುವು, ಬಾಪೂಜಿನಗರ,
ಶಿವಮೊಗ್ಗ.

Janatheya pranaalike A booklet published by 'prajaprabhutvakkagi janara okkoota' (peoples' alliance for democracy). Address: Durga nilaya, 2nd cross, Bapuji nagara, Shimoga. Phone: 94482 56216

**ಜನತೆಯ ಪ್ರಣಾಳಿಕೆ**
ಪ್ರಕಾಶಕರು:
ಪ್ರಜಾಪ್ರಭುತ್ವಕ್ಕಾಗಿ ಜನರ ಒಕ್ಕೂಟ
ನಂ. 51, 29ನೇಕ್ರಾಸ್, 9ನೇ ಮೈನ್,
2ನೇ ಹಂತ ಬನಶಂಕರಿ, ಬೆಂಗಳೂರು-70

ಮತ್ತು

ಕೆ.ಎಲ್.ಅಶೋಕ, ದುರ್ಗಾನಿಲಯ,
2ನೇ ತಿರುವು, ಬಾಪೂಜಿನಗರ,
ಶಿವಮೊಗ್ಗ.

**ರಾಜ್ಯ ಸಂಯೋಜಕರು**
**ಕೆ.ಎಲ್.ಅಶೋಕ (9448256216),**
**ಎಎಂಎಂ ಶಾಫಿ (9448777333),**
**ಜೆ.ಎಂ.ವೀರಸಂಗಯ್ಯ (9449300672),**
**ಮಲ್ಲಿಕಾ ಘಂಟಿ (9448449986)**
**ಪ್ರೊ.ಬಿ.ಗಂಗಾಧರಮೂರ್ತಿ (9448444071),**
**ಡಾ.ಮ.ಪು.ಪೂರ್ಣಾನಂದ (9448754996),**
**ಮಹಾಲಿಂಗಪ್ಪ ಆಲಬಾಳ (9945573616)**

**ಸೂಚಿತ ಕೊಡುಗೆ: 2ರೂ.**

**ಮೇ 2008ರ ಕರ್ನಾಟಕದ ವಿಧಾನಸಭಾ ಚುನಾವಣೆಯ ಸಂದರ್ಭದಲ್ಲಿ ನೂರಾರು ಪ್ರಗತಿಪರ ಸಂಘಟನೆಗಳು ಮತ್ತು ವ್ಯಕ್ತಿಗಳ ಒಕ್ಕೂಟವಾದ ಮೇಲ್ಕಂಡ ಒಕ್ಕೂಟದಿಂದ ಪ್ರಕಟವಾದುದು**



# ಜನತೆಯ ಪ್ರಣಾಳಿಕೆ ಏಕೆ?

ಈ ಮೇ ತಿಂಗಳಲ್ಲಿ ಕರ್ನಾಟಕದ ಜನತೆಯ ಮುಂದೆ ಇನ್ನೊಂದು ಚುನಾವಣೆ ಬರುತ್ತಿದೆ. ಈ ಹಿಂದೆ ಕಳೆದ 60 ವರ್ಷಗಳಲ್ಲಿ ಇಂತಹ ಹತ್ತಾರು ಚುನಾವಣೆಗಳು ಬಂದು ಹೋಗಿವೆ. ಕರ್ನಾಟಕದ ಪ್ರಜ್ಞಾವಂತ ಮತದಾರರು ಆ ಚುನಾವಣೆಗಳಲ್ಲಿ ತಮಗೆ ಬೇಡವಾದ ಸರ್ಕಾರಗಳನ್ನು ತಿರಸ್ಕರಿಸಿದ್ದಾರೆ; ಹೊಸ ಸರ್ಕಾರಗಳನ್ನು ಆಯ್ಕೆ ಮಾಡಿದ್ದಾರೆ. ಹೊಸ ಸರ್ಕಾರಗಳ ಜನವಿರೋಧಿ ನೀತಿಗಳಿಂದ ಬೇಸತ್ತು ಮತ್ತೆ ಅವರಿಗೆ ಪಾಠ ಕಲಿಸಿದ್ದಾರೆ. ಅದರೆ ಯಾರನ್ನು ಗೆಲ್ಲಿಸಿದರೂ ವಿಶ್ವಾಸಘಾತಕ್ಕೆ ಗುರಿಯಾಗಿ ಹೀನ ಸೋಲನ್ನು ಅನುಭವಿಸಿದ್ದು ಜನರೇ ಆಗಿದ್ದೇವೆ. ಏಕೆಂದರೆ ಯಾವೊಂದು ಪಕ್ಷವೂ ಜನರ ಆಶೋತ್ತರಗಳಿಗೆ ಬದ್ಧವಾಗುಳಿಯಲಿಲ್ಲ.

2004ರಲ್ಲಿ ನಡೆದ ಚುನಾವಣೆಯಲ್ಲಿ ಕರ್ನಾಟಕದಲ್ಲಿ ಯಾವ ಒಂದು ಪಕ್ಷಕ್ಕೂ ಬಹುಮತ ಬರಲಿಲ್ಲ. ಆಗ ಮೊದಲಿಗೆ ಕಾಂಗ್ರೆಸ್ ಮತ್ತು ಜನತಾದಳಗಳು ನಂತರ ಜನತಾದಳ ಮತ್ತು ಬಿಜೆಪಿ ಪಕ್ಷಗಳು ಸೇರಿ ಅಧಿಕಾರವನ್ನು ನಡೆಸಿದವು. ಆ ಅವಧಿಯ ಕೊನೆಯ ಭಾಗದಲ್ಲಿ 'ಅಧಿಕಾರ ಹಸ್ತಾಂತರ'ವೆಂಬ ಒಂದು ಅಸಹ್ಯಕರವಾದ ನಾಟಕವೂ ನಡೆಯಿತು. ಈ ಮೂರೂ ಪ್ರಮುಖ ಪಕ್ಷಗಳು ನಡೆದುಕೊಂಡ ರೀತಿಯನ್ನು ಜನರು ನೋಡಿ ತಮ್ಮ ಓಟಿಗಾಗಲೀ, ಪ್ರಜಾಪ್ರಭುತ್ವಕ್ಕಾಗಲೀ ಇವರುಗಳು ಯಾವ ಬೆಲೆಯನ್ನೂ ಉಳಿಸಿಲ್ಲವೆಂಬುದನ್ನು ಕಂಡುಕೊಂಡರು.

ಸರ್ಕಾರಗಳು ವಿಧಾನಸೌಧದ ಬದಲಿಗೆ ರೆಸಾರ್ಟ್‌ಗಳಲ್ಲಿ ರೂಪಿತವಾದವು; ಈ ನಾಡಿನ ಭೂಮಿಯನ್ನು ಮಾರಿ ಅಥವ ಭೂಮಿಯ ಒಡಲಲ್ಲಿನ ಸಂಪತ್ತನ್ನು ಬರಿದು ಮಾಡಿ ಕುಬೇರರಾದ ಕೆಲವು ದಗಾಕೋರರು ಸರ್ಕಾರಗಳನ್ನು ಕೊಂಡುಕೊಳ್ಳುತ್ತಿರುವುದು ಮತ್ತು ಮಾರುತ್ತಿರುವುದು ಸ್ಪಷ್ಟವಾಗಿ ಕಂಡುಬಂತು. ಈಗ ನಡೆಯಲಿರುವ ಚುನಾವಣೆಯನ್ನೂ ಸಹ ಇವರೆಲ್ಲರೂ ಅದೇ

ರೀತಿ ಹಣವನ್ನು ಚೆಲ್ಲಿ, ಹಣವನ್ನು ಮಾಡಿಕೊಳ್ಳುವ ವ್ಯಾಪಾರವಾಗಿಯಷ್ಟೇ ನಡೆಸಲು ಹೊರಟಿರುವುದು ಕಾಣುತ್ತಿದೆ. ಚುನಾವಣೆಗೆ ಮುಂಚೆ ತಮ್ಮ ಪಕ್ಷಗಳ 'ಸಿದ್ಧಾಂತ'ವನ್ನು ಪ್ರಕಟಿಸುವ ಪಕ್ಷಗಳು ನಂತರದಲ್ಲಿ ಅಧಿಕಾರ ಹಿಡಿಯಲು ಅವೆಲ್ಲವನ್ನೂ ಗಾಳಿಗೆ ತೂರುತ್ತಾರೆ. ಆದ್ದರಿಂದಲೇ ಜಾತ್ಯಾತೀತವೆಂದು ಹೇಳಿಕೊಳ್ಳುತ್ತಿದ್ದ ಜನತಾದಳವು, ದಲಿತರ ಪರ ಎಂದು ಹೇಳುತ್ತಿದ್ದ ಬಿಎಸ್‌ಪಿಯು ಕೋಮುವಾದಿ ಮತ್ತು ಪುರೋಹಿತಶಾಹಿ ಬಿಜೆಪಿಯ ಜೊತೆ ಕೈಜೋಡಿಸಲು ಸಾಧ್ಯವಾಗಿದ್ದು. ಹಾಗಿದ್ದ ಮೇಲೆ ಈ ಪಕ್ಷಗಳು ತಾವೇ ಘೋಷಿಸಿಕೊಳ್ಳುವ ಸಿದ್ಧಾಂತಗಳು ಮತ್ತು ನೀತಿಗಳನ್ನಾದರೂ ನಂಬಲು ಹೇಗೆ ಸಾಧ್ಯ?

**ಚುನಾವಣೆಗಳಲ್ಲಿ ಎಲ್ಲರಿಗೂ ಒಂದೇ ಮೌಲ್ಯದ ಓಟಿದೆ. ಈ ರಾಜಕೀಯ ಹಕ್ಕೂ ಸಹ ಜನರು ಯೂರೋಪ್ ದೇಶಗಳಲ್ಲಿ ಅಲ್ಲಿನ ರಾಜಪ್ರಭುತ್ವದ ವಿರುದ್ಧ ಮತ್ತು ನಮ್ಮ ದೇಶದಲ್ಲಿ ಬ್ರಿಟಿಷರ ವಿರುದ್ಧ ನಡೆಸಿದ ಹೋರಾಟದ ಫಲವಾಗಿ ಗಳಿಸಿಕೊಂಡದ್ದು. ಆದರೆ ಒಂದೇ ಮೌಲ್ಯದ ಓಟನ್ನು ಹೊಂದಿರುವ ಸಾಮಾನ್ಯ ಜನತೆ ಪ್ರತಿಯೊಂದು ಚುನಾವಣೆಯಲ್ಲೂ ಹೆಚ್ಚೆಚ್ಚು ಸೋಲುತ್ತಾ, ಬಂಡವಾಳಶಾಹಿಗಳು ಮತ್ತು ಶ್ರೀಮಂತ ರಾಜಕಾರಣಿಗಳು ಗೆಲ್ಲುತ್ತಾ ಬರುತ್ತಿದ್ದಾರೆ. ಅಂದರೆ ಪ್ರತಿ ಚುನಾವಣೆಯಲ್ಲೂ ಈ ದೇಶದ ಪ್ರಜಾಪ್ರಭುತ್ವವು ಸೋಲುತ್ತಿದೆ.**

ಪ್ರಜೆಗಳೆ ಪ್ರಭುಗಳು ಎಂಬುದು ಪ್ರಜಾಪ್ರಭುತ್ವದ ಸಾರ. ಅಂದರೆ ಈ ದೇಶದ ಬಹುಸಂಖ್ಯಾತ ಜನಸಾಮಾನ್ಯರು ನಿಜವಾದ ಪ್ರಭುಗಳಾಗಿರಬೇಕು ಎಂಬುದು ಇದರ ಅರ್ಥ. ಆದರೆ ಕಳೆದ 60 ವರ್ಷಗಳಲ್ಲಿ ನಡೆದ ಹಲವಾರು ಚುನಾವಣೆಗಳಲ್ಲಿ ಜನಸಾಮಾನ್ಯರಾದ ನಮಗೆ ಸಿಕ್ಕ ಪಾತ್ರವಾದರೂ ಏನು? ಬಲಾಢ್ಯ ದಣಿಗಳು ಅಧಿಕಾರಕ್ಕೇರಲು ಬೆನ್ನು ನೀಡಿ ಮೆಟ್ಟಿಲಾದದ್ದು. ಚಾಟಿ ನೀಡಿ ಹೊಡೆಸಿಕೊಳ್ಳುವ ದಾಸರಾದದ್ದು. ಆಳುವವರು ಜನರ ಸಂಪತ್ತನ್ನು ಬಾಚುತ್ತಿರುವುದನ್ನು ಅಸಹಾಯಕರಾಗಿ ನಿಂತು ನೋಡುವ ಪ್ರೇಕ್ಷಕರಾದದ್ದು. ಇದು ಒಂದು ಚುನಾವಣೆಯ ಕತೆಯಲ್ಲ, ಕೇವಲ ಕರ್ನಾಟಕದ ಕತೆಯೂ ಅಲ್ಲ. ಎಲ್ಲಾ ಆಳ್ವಿಕೆಗಳಲ್ಲಿ, ಎಲ್ಲಾ ರಾಜ್ಯಗಳಲ್ಲಿ ಜನಸಾಮಾನ್ಯರು ಅನುಭವಿಸಿದ ವಂಚನೆಯ ಹಾಗೂ ಸೋಲಿನ ಗಾಥೆ. ಈ ಬಾರಿಯ ಚುನಾವಣೆಯೂ ಇದಕ್ಕಿಂತ ಹೊರತಾಗಿರುವುದಿಲ್ಲ.

ಹಾಗಾದರೆ ಈ ಚುನಾವಣೆಯಲ್ಲಿ ನಾವೇನು ಮಾಡಬೇಕು? ಈ ಹೊಲಸು ರಾಜಕೀಯವೆ ಬೇಡ ಎಂದು ಕೈಕಟ್ಟಿ ಕೂರಬೇಕೆ? ಅಥವಾ ಯಥಾ ಪ್ರಕಾರ ಮತ್ತೊಂದು ಪಕ್ಷಕ್ಕೆ ಚಾಟಿ ಕೊಟ್ಟು ಬೆನ್ನು ನೀಡಬೇಕೆ? ಅಥವ ಹಳೆಯ ಅನುಭವಗಳ ಹಿನ್ನೆಲೆಯಲ್ಲಿ ಹೊಸ ಹಾದಿಯ ಹುಡುಕಾಟದಲ್ಲಿ ತೊಡಗಬೇಕೆ? ನಾಡಿನ ಬಗ್ಗೆ ಪ್ರಾಮಾಣಿಕ ಕಳಕಳಿಯುಳ್ಳ ಹಲವಾರು ಜನಪರ ಸಂಘಟನೆಗಳು ಮತ್ತು ವ್ಯಕ್ತಿಗಳು ಚುನಾವಣಾ ರಾಜಕೀಯದಿಂದ ಸಂಪೂರ್ಣ ದೂರವುಳಿವ ಅಥವಾ ಯಾವುದಾದರೊಂದು ಪಕ್ಷದ ಬಾಲಂಗೋಚಿಗಳಾಗುವ ಎರಡೂ ದಾರಿಗಳಿಗಿಂತ ಹೊರತಾಗಿ ಹೊಸ ಹಾದಿಯನ್ನು ಹುಡುಕಿಕೊಂಡಿದ್ದೇವೆ. ಜನಸಾಮಾನ್ಯರಾದ ನಾವು ಪ್ರೇಕ್ಷಕರೂ ಆಗದೆ, ಯಾವುದೇ ಒಂದು ಪಕ್ಷದ ಚಾಮರವೂ ಆಗದೆ, ನಿಜವಾದ ಜನಪರ್ಯಾಯವಾಗಿ ಒಗ್ಗೂಡಬೇಕು. ಜನರ ಭವಿಷ್ಯಕ್ಕೆ ಅತ್ಯಂತ ಮಾರಕವಾಗುವ ಜನಶತ್ರುಗಳು ಅಧಿಕಾರಕ್ಕೆ ಬರದಂತೆ ತಡೆಯುವ, ಕನಿಷ್ಠ ಜನರ ಬೇಡಿಕೆಗಳಿಗೆ ಬದ್ಧತೆಯನ್ನು ತೋರುವವರನ್ನು ಬೆಂಬಲಿಸುವ, ಯಾರೇ ಅಧಿಕಾರಕ್ಕೆ ಬಂದರೂ ಜನಪರ ನೀತಿಗಳನ್ನು ಜಾರಿ ಮಾಡುವಂತೆ ಆಗ್ರಹಿಸಿ ಹೋರಾಡುವ ಪರ್ಯಾಯ

ಶಕ್ತಿಯಾಗಬೇಕು ಎನ್ನುವ ಉದ್ದೇಶದೊಂದಿಗೆ ಪ್ರಜಾಪ್ರಭುತ್ವಕ್ಕಾಗಿ ಜನರ ಒಕ್ಕೂಟಕ್ಕೆ ರೂಪ ನೀಡಿದ್ದೇವೆ.

ಈ ಬಾರಿಯ ಅಧಿಕಾರಕ್ಕಾಗಿನ ಪೈಪೋಟಿಯಲ್ಲಿ ಬಿಜೆಪಿಯೂ ಮುಖ್ಯ ಸ್ಪರ್ಧಾಳುವಾಗಿದ್ದು, ಅಧಿಕಾರಕ್ಕೆ ಬರುವ ಸಾಧ್ಯತೆಯೂ ಇರುವುದನ್ನು ಒಕ್ಕೂಟದ ಸ್ಥಾಪನಾ ಸಭೆಯು ಚರ್ಚಿಸಿತು. ಆರ್ಥಿಕ ನೀತಿಗಳಲ್ಲಿ ಕಾಂಗ್ರೆಸ್, ಜನತಾದಳ ಮತ್ತು ಬಿಜೆಪಿಗಳ ನಡುವೆ ದೊಡ್ಡ ವ್ಯತ್ಯಾಸವಿಲ್ಲವಾದರೂ ಸಮಾಜದ ಪ್ರಗತಿಯ ದೃಷ್ಟಿಯಿಂದ ಬಿಜೆಪಿ ಅತ್ಯಂತ ಅಪಾಯಕಾರಿ ಎಂದು ಸಭೆ ಒಕ್ಕೊರಲಿನಿಂದ ತೀರ್ಮಾನಿಸಿತು. ಯಾವುದೇ ಪ್ರಜಾತಾಂತ್ರಿಕ ದೇಶದ ಅಡಿಪಾಯವಾಗಬೇಕಾದ ಮತೀಯ ಸಾಮರಸ್ಯ, ಸಮಾನತೆ ಮತ್ತು ಜಾತ್ಯಾತೀತತೆಯ ಆಶಯಗಳಿಗೆ ಈ ಪಕ್ಷ ವಿರುದ್ಧವಾಗಿದೆ ದಲಿತರು-ಅಲ್ಪಸಂಖ್ಯಾತರು-ಹಿಂದುಳಿದವರು-ಮಹಿಳೆಯರು- ಬಡವರು ಇನ್ನಿತ್ಯಾದಿ ದಮನಿತ ಸಮುದಾಯಗಳಿಗೆ ಸಮಾನ ಸ್ಥಾನಮಾನ ಸಿಗಬೇಕೆಂಬುದನ್ನು ವಿರೋಧಿಸುವ ಸಿದ್ಧಾಂತವನ್ನು ಹೊಂದಿರುವ ಪ್ರಗತಿವಿರೋಧಿ ಪಕ್ಷ ಬಿಜೆಪಿ. ಅದರಲ್ಲೂ ಅಲ್ಪಸಂಖ್ಯಾತರನ್ನು ಎರಡನೆಯ ದರ್ಜೆಯ ಪ್ರಜೆಗಳನ್ನಾಗಿ ನೋಡಬಯಸುವ, ಸಾವಿರಾರು ಜನರ ಮಾರಣಹೋಮವನ್ನು ನಡೆಸಿ ಅದನ್ನು ಬಹಿರಂಗವಾಗಿ ಸಮರ್ಥಿಸಿಕೊಳ್ಳುವ ಪಕ್ಷ. ಜನರ ನಿಜವಾದ ಸಮಸ್ಯೆಗಳಿಗೆ ಉತ್ತರ ಹುಡುಕುವ ಬದಲು ಅವರನ್ನು ಇಲ್ಲದ ಮತೀಯ ಸಂಘರ್ಷಕ್ಕಿಳಿಸಿ ತನ್ನ ಬೇಳೆ ಬೇಯಿಸಿಕೊಳ್ಳುವ ಪಕ್ಷ. ಈ ಎಲ್ಲಾ ಕಾರಣಗಳಿಂದಾಗಿ ಬಿಜೆಪಿಯು ಪ್ರಜಾಪ್ರಭುತ್ವದ ಆಶಯಗಳಿಗೇ ವಿರುದ್ಧವಿರುವ ಪಕ್ಷವಾಗಿದೆ. ಹಾಗಾಗಿ ಬಿಜೆಪಿ ಅಧಿಕಾರಕ್ಕೆ ಬರದಂತೆ ತಡೆಯುವುದು ಮುಖ್ಯ ಕರ್ತವ್ಯವೆಂದು ಸಭೆ ತೀರ್ಮಾನಿಸಿತು.

ಅದೇ ಸಂದರ್ಭದಲ್ಲಿ ಜನತೆಯ ಆಶಯಗಳಿಗೆ ದ್ರೋಹ ಬಗೆಯದಂತೆ ಇತರೆ ರಾಜಕೀಯ ಪಕ್ಷಗಳಿಗೆ ಎಚ್ಚರಿಕೆ ನೀಡಬೇಕು. ಜನತೆಯ ಸಮಾವೇಶವನ್ನು ನಡೆಸಿ, ಅದರಲ್ಲಿ ಜನತೆಯ ಆಶೋತ್ತರಗಳನ್ನು ಪ್ರತಿನಿಧಿಸುವ 'ಜನರ ಪ್ರಣಾಳಿಕೆ'ಯನ್ನು ಬಿಡುಗಡೆ ಮಾಡಿ, ಅದರ ಬಗ್ಗೆ ತಮ್ಮ ನಿಲುವನ್ನು ಪ್ರಕಟಿಸಲು ಪಕ್ಷಗಳನ್ನು ಆಗ್ರಹಿಸಬೇಕೆಂದು ತೀರ್ಮಾನಿಸಲಾಯಿತು. ಅದರ ಭಾಗವಾಗಿ ಈ 'ಜನತೆಯ ಪ್ರಣಾಳಿಕೆ'ಯನ್ನು ಹೊರತರಲಾಗಿದೆ.

ಕರ್ನಾಟಕದ ಜನ ಸಾಮಾನ್ಯರ ಆಶೋತ್ತರಗಳನ್ನು ಬಿಂಬಿಸುವ ಈ ಪ್ರಣಾಳಿಕೆಗೆ ರಾಜಕೀಯ ಪಕ್ಷಗಳು ಪ್ರತಿಕ್ರಿಯಿಸಬೇಕೆಂದು ನಾವು ಒತ್ತಾಯಿಸುತ್ತೇವೆ. ಬಿಜೆಪಿಯಂತಹ ಪಕ್ಷದ ತಳಹದಿಯೇ ಜನವಿರೋಧಿ ಮತ್ತು ಪ್ರಜಾತಂತ್ರ ವಿರೋಧಿಯಾಗಿರುವುದರಿಂದ ಆ ಪಕ್ಷ ಅಧಿಕಾರಕ್ಕೆ ಬರುವುದನ್ನು ತಡೆಯಬೇಕಾದ್ದು ನಮ್ಮೆಲ್ಲರ ಕರ್ತವ್ಯವಾಗಿದೆ. ಆ ಪಕ್ಷಕ್ಕೆ ಯಾರೂ ಓಟು ನೀಡಬಾರದು. ಇತರೆ ಪಕ್ಷಗಳು ಈ ಪ್ರಣಾಳಿಕೆಗೆ ಯಾವ ರೀತಿ ಪ್ರತಿಕ್ರಿಯಿಸುತ್ತಾರೆಂಬುದರ ಆಧಾರದ ಮೇಲೆ ಅವರಿಗೆ ಬೆಂಬಲ ನೀಡುವ ಬಗ್ಗೆ ಈ ನಾಡಿನ ಜನತೆ ತೀರ್ಮಾನಿಸುತ್ತಾರೆ.

# 1. ನಾವು ಎಂತಹ ಪ್ರಜಾಪ್ರಭುತ್ವವನ್ನು ಬಯಸುತ್ತೇವೆ?

ಚುನಾವಣೆಯ ಸಂದರ್ಭದಲ್ಲಿ ಈ ಪ್ರಶ್ನೆಯನ್ನು ಹಾಕಿಕೊಳ್ಳುವುದು ಅತ್ಯಂತ ಮುಖ್ಯವಾಗಿದೆ. ಏಕೆಂದರೆ ಚುನಾವಣೆಯು ಪ್ರಜಾತಂತ್ರದ ಜೀವನಾಡಿಯಂತೆ ಇರಬೇಕಾಗಿತ್ತು. ಈ ಕೆಲಸವನ್ನು ಈ ನಾಡಿನ ಜನತೆಯಾದ ನಾವು ಜನವಿರೋಧಿ ಆಳುವ ಸರ್ಕಾರಗಳನ್ನು ಸೋಲಿಸುವ ಮೂಲಕ ಆಗಾಗ ಒಂದು ಮಟ್ಟಿಗೆ ಮಾಡುತ್ತಾ ಬಂದಿದ್ದೇವೆ. ಆದರೆ ರಾಜಕೀಯ ಪಕ್ಷಗಳು ಏನನ್ನು ಮಾಡಿವೆ? ಅವು ಇದನ್ನು ಹದಗೆಡಿಸುವ ಕೆಲಸವನ್ನೇ ಮಾಡುತ್ತಾ ಬಂದಿವೆ. ಈ ಬಾರಿಯೂ ಎಷ್ಟು ಸಾಧ್ಯವೋ ಅಷ್ಟು ಹದಗೆಡಿಸಲು ಎಲ್ಲಾ ರೀತಿಯಲ್ಲೂ ಸಿದ್ಧತೆಗಳಲ್ಲಿ ತೊಡಗಿವೆ. ಈ ಸಂದರ್ಭದಲ್ಲಿ ದೊಡ್ಡ ಪ್ರಮಾಣದಲ್ಲಿ ಹಣವನ್ನು ಚೆಲ್ಲುವುದು ನಡೆಯುತ್ತದೆ. ಜನರಿಗೆ ನೂರಾರು ರೀತಿಯ ಆಸೆ, ಆಮಿಷಗಳನ್ನೊಡ್ಡಲಾಗುತ್ತದೆ. ದೊಡ್ಡ ಸಂಖ್ಯೆಯಲ್ಲಿರುವ ಬಡವರ ಅಸಹಾಯಕತೆಯನ್ನು ದುರುಪಯೋಗ ಮಾಡಿಕೊಳ್ಳಲು ಹಣ, ಹೆಂಡ, ಸೀರೆ, ಪಂಚೆ, ಪಂಚಾಂಗದಿಂದ ಹಿಡಿದು, ಪಾತ್ರೆ, ಕಲರ್ ಟಿವಿ, ಸೈಕಲ್ಲು, ಮೂಗುಬಟ್ಟು ಹೀಗೆ ಆಮಿಷಗಳನ್ನು ಮುಂದಿಡುತ್ತಿರುವುದನ್ನು ಕಾಣುತ್ತೇವೆ. ಇದಲ್ಲದೆ ಮತಗಟ್ಟೆಗಳನ್ನು ವಶಕ್ಕೆ ತೆಗೆದುಕೊಂಡು ರಿಗ್ಗಿಂಗ್ ಮಾಡುವುದು, ಜನರನ್ನು ಮತ ನೀಡಲು ಒತ್ತಾಯಿಸುವುದು ಅಥವಾ ಮತ ಹಾಕದಂತೆ ತಡೆಯುವುದು, ಸುಳ್ಳು ಮತದಾನ ನಡೆಸುವುದು, ಮತದಾರರ ಪಟ್ಟಿಯಿಂದ ಹೆಸರುಗಳನ್ನು ಇಲ್ಲದಂತೆ ಮಾಡುವುದು, ಇದಕ್ಕಾಗಿ ದೈಹಿಕ ದಾಳಿ, ಹಲ್ಲೆ-ಕೊಲೆಗಳಿಗೆ ಮುಂದಾಗುವುದು ಇವೆಲ್ಲವೂ ಚುನಾವಣಾ ಪ್ರಕ್ರಿಯೆಯ ಅತ್ಯಂತ ಸಹಜ ಅವಿಭಾಜ್ಯ ಅಂಗಗಳಂತಾಗಿವೆ. ಈ ವಿಚಾರದಲ್ಲಿ ಮೇಲೆ ಹೇಳಲಾದ ಪ್ರಮುಖ ರಾಜಕೀಯ ಪಕ್ಷಗಳಲ್ಲಿ ಯಾವುದೇ ವ್ಯತ್ಯಾಸವಿಲ್ಲ.

1989ರಲ್ಲಿ ಕರ್ನಾಟಕದಲ್ಲಿ ಪಿ.ಲಂಕೇಶ್ ಮತ್ತು ಇನ್ನಿತರ ಪ್ರಗತಿಪರರು ಸೇರಿ ರಚಿಸಿದ 'ಕರ್ನಾಟಕ ಪ್ರಗತಿರಂಗ'ದ ಪ್ರಣಾಳಿಕೆಯಲ್ಲಿ 'ರಾಜ್ಯದಲ್ಲಿ ಪ್ರತಿ ಚುನಾವಣೆಗೆ 20 ಕೋಟಿಗಳಷ್ಟು ಹಣ ಖರ್ಚು ಮಾಡುತ್ತಿದ್ದಾರೆ' ಎಂಬ ಮಾತಿದೆ. ಆದರೆ ಇಂದು ಒಟ್ಟಾರೆ ರಾಜ್ಯದಲ್ಲಲ್ಲ, ಒಂದೊಂದು ವಿಧಾನಸಭಾ ಕ್ಷೇತ್ರದಲ್ಲೇ 20 ಕೋಟಿಗಿಂತ ಹೆಚ್ಚು ಖರ್ಚು ಮಾಡಬಲ್ಲ ಹಲವು ಅಭ್ಯರ್ಥಿಗಳು ಕಣದಲ್ಲಿದ್ದಾರೆ. ಈ ಹಣವೆಲ್ಲಾ ಎಲ್ಲಿಂದ

ಬರುತ್ತದೆ? ಅದು ಈ ನಾಡಿನ ಜನತೆಯನ್ನು ಶೋಷಿಸದೆ, ನಾಡಿನ ಸಂಪತ್ತನ್ನು ಲೂಟಿ ಹೊಡೆಯದೆ ಬರಲು ಸಾಧ್ಯವೇ ಇಲ್ಲ.

ಉದಾಹರಣೆಗೆ ಈ ಬಾರಿಯ ಚುನಾವಣೆಯಲ್ಲಿ ಮುಖ್ಯ ಪಾತ್ರ ವಹಿಸಲಿರುವ ಎರಡು ರೀತಿಯ ಹಣವಿದೆ. ಒಂದು, ಗಣಿ ಹಣ. ಇನ್ನೊಂದು ರಿಯಲ್ ಎಸ್ಟೇಟ್ ಹಣ. ಈ ಎರಡೂ ಉದ್ದಿಮೆಗಳಲ್ಲಿ ಕಳೆದ 5–6 ವರ್ಷಗಳಲ್ಲಿ ಹಣ ಮಾಡಿರುವ ಕುಬೇರರಲ್ಲಿ ಕನಿಷ್ಠ 100 ಜನರಾದರೂ ಈ ಬಾರಿ ಚುನಾವಣೆಗಳಲ್ಲಿ ಸ್ಪರ್ಧಿಸುತ್ತಾರೆ. ವಿಶೇಷವಾಗಿ ಕರ್ನಾಟಕದ ಬಳ್ಳಾರಿ ಭಾಗದಲ್ಲಿ ಗಣಿ ಉದ್ದಿಮೆ ನಡೆದಿದೆ. ಅಲ್ಲಿನ ಭೂಗರ್ಭದಲ್ಲಿ ಈ ರಾಜ್ಯದ ಸಕಲ ಪ್ರಜೆಗಳಿಗೆ, ವಿಶೇಷವಾಗಿ ಸ್ಥಳೀಯರಿಗೆ ಸೇರಿರುವ ಕಬ್ಬಿಣ ಮತ್ತು ಮ್ಯಾಂಗನೀಸ್ ಸಂಪತ್ತನ್ನು ಪ್ರತಿನಿತ್ಯ ದೋಚಲಾಗುತ್ತಿದೆ. ಅದರಲ್ಲಿ ಸಾವಿರಾರು ಕೋಟಿ ರೂಪಾಯಿಗಳ ಹಣ ಲೂಟಿಯಾಗುತ್ತಿದೆ. ಅದೇ ರೀತಿ ಬೆಂಗಳೂರು ಮತ್ತು ರಾಜ್ಯದ ವಿವಿಧ ಭಾಗಗಳಲ್ಲಿ ಭೂಕಬಳಿಕೆ ನಡೆಸಿ ಕೋಟ್ಯಾಂತರ ಹಣ ಮಾಡಿಕೊಂಡವರಿದ್ದಾರೆ. ಅಂತಹವರು ಇದೀಗ ಅದೇ ಹಣವನ್ನು ಚೆಲ್ಲಿ ಚುನಾವಣೆಯಲ್ಲಿ ಗೆಲ್ಲಬಯಸಿದ್ದಾರೆ. ಗೆಲ್ಲುವುದು ಏತಕ್ಕೆ? ಮತ್ತಷ್ಟು ದೋಚಿ ಶ್ರೀಮಂತರಾಗುವುದಕ್ಕೆ. ಈ ಉದ್ದಿಮೆಗಳಲ್ಲಿ ತೊಡಗಿರುವವರು ಮೇಲೆ ಹೇಳಿದ ಮೂರೂ ರಾಜಕೀಯ ಪಕ್ಷಗಳಿಗೆ ಸೇರಿದ್ದಾರೆ. ಬಿಜೆಪಿ ಪಕ್ಷ ಅದರಲ್ಲಿ ಮಿಕ್ಕೆಲ್ಲರಿಗಿಂತ ಮುಂದಿದ್ದು, ಅದರ ಕೆಲವು ನೇತಾರರು ಇಡೀ ರಾಜ್ಯದ ಚುನಾವಣಾ ಖರ್ಚನ್ನು ನಿಭಾಯಿಸಲು ಮುಂದಾಗಿ ಕರ್ನಾಟಕವನ್ನು ಕೊಳ್ಳಲು ಹುನ್ನಾರ ನಡೆಸಿದ್ದಾರೆ.

ಇಂತಹ ರಾಜಕೀಯ ಪಕ್ಷಗಳು ನಮಗೆ ಬೇಕೆ? ಈ ಹಣ ಯಾರದ್ದು? ಈ ನಾಡಿನ ಸಂಪತ್ತು ಯಾರದ್ದು? ಗಣಿ ದೊರೆಗಳೇ ನೇರವಾಗಿ ನಾಯಕರಾಗಿರುವ ಬಿಜೆಪಿ ಅದನ್ನು ಯಾವ ರೀತಿ ಸಮರ್ಥಿಸಿಕೊಳ್ಳುತ್ತದೆ? ನಾವು ಬೆಂಬಲಿಸಬೇಕಾದ ಪಕ್ಷಗಳು ಇಂತಹ ಹಣದಿಂದ ಮುಕ್ತವಾಗಿರಬೇಕಲ್ಲವೇ? ಈ ನಾಡಿನ ಸಂಪತ್ತಿನ ಮೇಲೆ ಎಲ್ಲಾ ಜನರಿಗೂ ಹಕ್ಕಿರುವುದರಿಂದ ಗಣಿಗಳನ್ನು ರಾಷ್ಟ್ರೀಕರಣ ಮಾಡಲು ಮತ್ತು ಅದರ ಮಾಲೀಕರ ಅಕ್ರಮ ಸಂಪತ್ತನ್ನು ಮುಟ್ಟುಗೋಲು ಹಾಕಿಕೊಳ್ಳಲು ಸಿದ್ಧರಾಗಿರುವುದಾಗಿ ಘೋಷಿಸಬಲ್ಲರೇ?

ಪ್ರಜಾಪ್ರಭುತ್ವವನ್ನು ಹದಗೆಡಿಸುತ್ತಿರುವ ಇನ್ನೊಂದು ಅಂಶವಿದೆ. ಅದು ಜಾತಿ/ಧರ್ಮಗಳ ಆಧಾರದ ಮೇಲೆ ಚುನಾವಣೆಯನ್ನು ನಡೆಸುವುದು. ಬಲಾಢ್ಯರು ತಮ್ಮ ಅಧಿಪತ್ಯವನ್ನು ಮುಂದುವರೆಸಲೆಂದು ಇದನ್ನು ಬಳಸಿದರೆ ಅಥವಾ ದೇಶದ ಜನರನ್ನು ಒಡೆಯಲು ಇದನ್ನು ಉಪಯೋಗಿಸಿಕೊಂಡರೆ ಅದು ಪ್ರಜಾಪ್ರಭುತ್ವವನ್ನು ದುರ್ಬಲಗೊಳಿಸುತ್ತದೆ. ಏಕೆಂದರೆ ಅಂತಹ ಪ್ರಕ್ರಿಯೆಯು ದಮನಿತರನ್ನು ಪ್ರಜಾತಂತ್ರದ ಕನಿಷ್ಠ ಅವಕಾಶಗಳಿಂದಲೂ ವಂಚಿತರನ್ನಾಗಿಸುತ್ತದೆ. ಹಾಗಾಗಿ ಅದನ್ನು ಈ ನಾಡಿನ ಜನತೆಯಾದ ನಾವು ವಿರೋಧಿಸುತ್ತೇವೆ.

ಮೇಲ್ಕಂಡ ಕಪಟ ದಾರಿಗಳನ್ನು ಯಥೇಚ್ಛವಾಗಿ ಬಳಸುವುದಲ್ಲದೆ, ಇಡೀ ದೇಶದಲ್ಲಿ ಕೋಮುವಾದದ ದಳ್ಳುರಿ ಹಚ್ಚಿ ಮೈಕಾಯಿಸಿಕೊಳ್ಳಲು ಹೊರಟಿರುವ ಬಿಜೆಪಿಯ ಕುಕೃತ್ಯಗಳನ್ನು ಇಲ್ಲಿ ವಿಶೇಷವಾಗಿ ಪ್ರಸ್ತಾಪಿಸಬೇಕಿದೆ. ಅದು 1990ರ ದಶಕದಲ್ಲಿ ಬಾಬ್ರಿಮಸೀದಿ–ರಾಮಜನ್ಮಭೂಮಿ ವಿವಾದ ಸೃಷ್ಟಿಸಿ, ದೇಶಾದ್ಯಂತ ಕೋಮುದಳ್ಳುರಿ ಹಚ್ಚಿ ದೇಶದ ಪ್ರಮುಖ ರಾಜಕೀಯ ಪಕ್ಷಗಳಲ್ಲೊಂದಾಗಿ ಬೆಳೆದು ಬಂದಿತು. ಗುಜರಾತಿನಲ್ಲಿ 2002ರಲ್ಲಿ

ರಕ್ತದೋಕುಳಿ ನಡೆಸಿ, 2000ಕ್ಕೂ ಹೆಚ್ಚು ಜೀವಗಳನ್ನು ಬಲಿಕೊಟ್ಟು ಅಧಿಕಾರವನ್ನಿಡಿಯಿತು. ಅದೇ ವರ್ಷ ಬಾಬಾಬುಡನ್‌ಗಿರಿಯನ್ನು ದಕ್ಷಿಣಭಾರತದ ಅಯೋಧ್ಯೆಯನ್ನಾಗಿ ಮಾಡುತ್ತೇವೆಂದು ಅವರ ನಾಯಕ ಅನಂತಕುಮಾರ್ ಘೋಷಿಸಿದರು. ಕರ್ನಾಟಕದಲ್ಲಿ ಅವರು ಬೆಳೆದು ಬಂದದ್ದೆ ಈದ್ಗಾ ಮತ್ತು ಬಾಬಾಬುಡನ್‌ಗಿರಿಯಂತಹ ವಿವಾದಗಳನ್ನು ಸೃಷ್ಟಿಸಿ. ಮುಸ್ಲಿಮರ ಮೇಲೆ, ಕ್ರಿಶ್ಚಿಯನ್ನರ ಮೇಲೆ ದಾಳಿ ನಡೆಸಿ. ಗಮನಿಸಬೇಕಾದ ಅಂಶವೆಂದರೆ ಬಿಜೆಪಿ ತನ್ನ ಓಟುಗಳನ್ನು ಹೆಚ್ಚಿಸಿಕೊಂಡಿದ್ದು ಜನಪರ ಕಾರ್ಯಗಳಿಂದಲೂ ಅಲ್ಲ ಅಥವ ಜನರ ಬದುಕನ್ನು ಕಿತ್ತುತಿನ್ನುತ್ತಿರುವ ನೈಜ ಸಮಸ್ಯೆಗಳ ವಿರುದ್ಧ ಹೋರಾಟ ನಡೆಸಿಯೂ ಅಲ್ಲ. ಬದಲಿಗೆ ಕೋಮುದ್ವೇಷವನ್ನು ಹರಡಿ. ಈ ರೀತಿ ಬೆಳೆದ ಪಕ್ಷವು ಯಾವ ರೀತಿಯಲ್ಲಿ ಪ್ರಜಾತಂತ್ರವನ್ನು ಬೆಳೆಸಲು ಸಾಧ್ಯವಿದೆ?

ನಿಜವಾದ ಪ್ರಜಾಪ್ರಭುತ್ವ ಅಸ್ತಿತ್ವಕ್ಕೆ ಬರುವುದೆಂದರೆ, ಜನ ಸಾಮಾನ್ಯರಾದ ರೈತರ, ಕಾರ್ಮಿಕರ, ದಲಿತರ, ಅಲ್ಪಸಂಖ್ಯಾತರ, ಮಹಿಳೆಯರ, ಹಿಂದುಳಿದವರ ನಿಜವಾದ ಪ್ರತಿನಿಧಿಗಳು ಆಡಳಿತಕ್ಕೆ ಬರಬೇಕು. ಮೇಲೆ ಉಲ್ಲೇಖಿಸಿರುವ ಅನೀತಿಯುತ ಆಚರಣೆಗಳಿಗೆ ಅವಕಾಶವಿರಬಾರದು. ದುಷ್ಪ್ರಭಾವಗಳಿಗೆ ಅವಕಾಶವಿಲ್ಲದೆ, ಸರಳ ಮತ್ತು ನೇರ ವಿಧಾನದಲ್ಲಿ ಅರ್ಹ ಅಭ್ಯರ್ಥಿಯನ್ನು ಆಯ್ಕೆ ಮಾಡುವುದಷ್ಟೆ ಅಲ್ಲ, ಅವರನ್ನು ಯಾವಾಗ ಬೇಕಾದರೂ ಹಿಂದಕ್ಕೆ ಕರೆಸಿಕೊಳ್ಳುವ ಅಧಿಕಾರ ಸಹ ಜನರಿಗಿರಬೇಕು. ಹಾಗಾಗಬೇಕಾದರೆ ಚುನಾವಣಾ ವಿಧಾನಗಳು ಬದಲಾಗಬೇಕು–ಚುನಾವಣೆ ನಡೆಸುವ ರೀತಿಗಳು ಬದಲಾಗಬೇಕು. ಭೌಗೋಳಿಕವಾರು ಪ್ರಾತಿನಿಧಿತ್ವ ಅಲ್ಲದೆ ಜನ ಸಮುದಾಯಗಳವಾರು ಪ್ರತಿನಿಧಿಗಳನ್ನು ಆಯ್ಕೆ ಮಾಡುವಂತೆಯೂ ಇರಬೇಕು. ಈ ಪ್ರತಿನಿಧಿಗಳು ನಾಮ ಮಾತ್ರದ ಪ್ರತಿನಿಧಿಗಳಾಗಿರದೆ, ನಿಜವಾಗಿಯೂ ಅದೇ ವೃತ್ತಿ ಕ್ಷೇತ್ರದಲ್ಲಿ ದುಡಿಯುತ್ತಿರುವವರು/ಜೀವಿಸುವವರಾಗಿರಬೇಕು. ಉದಾಹರಣೆಗೆ ನಿಜವಾಗಿಯೂ ರೈತ ಪ್ರತಿನಿಧಿಗಳು ಸ್ವಯಂ ದುಡಿಯುವ ರೈತರೆ ಆಗಿರುವಂಥ, ಕಾರ್ಮಿಕ ಪ್ರತಿನಿಧಿ ನಿಜವಾದ ಕಾರ್ಮಿಕರೆ ಆಗಿರುವಂಥ, ದಲಿತ ಪ್ರತಿನಿಧಿ ಜನ ಸಾಮಾನ್ಯ ದಲಿತರೆ ಆಗಿರುವಂಥ ರೀತಿಯಲ್ಲಿ ಚುನಾವಣೆಯ ವಿಧಾನಗಳನ್ನು ಮಾನದಂಡಗಳನ್ನು ಪುನರ್‌ರಚಿಸಬೇಕು.

- ಕಳೆದ 60 ವರ್ಷಗಳಲ್ಲಿ ಹಣವಂತರು ಹಾಗೂ ಬಲಾಢ್ಯರೆ ಏಕೆ ಅಧಿಕಾರಕ್ಕೆ ಬರಲು ಸಾಧ್ಯವಾಗಿದೆ? ಜನಸಾಮಾನ್ಯರ ನಿಜವಾದ ಪ್ರತಿನಿಧಿಗಳು ಗೆಲ್ಲುವಂತಹ, ಗೆದ್ದವರು ಜನರ ಆಶೋತ್ತರಗಳಿಗೆ ವಂಚನೆ ಬಗೆದಲ್ಲಿ ಕೂಡಲೆ ಅಧಿಕಾರದಿಂದ ಕೆಳಗಿಳಿಸಬಲ್ಲಂಥ, ದ್ರೋಹಕ್ಕೆ ತಕ್ಕ ಶಿಕ್ಷೆಯನ್ನು ವಿಧಿಸಬಲ್ಲಂಥ ಪ್ರಜಾತಂತ್ರದ ವಿಧಾನಗಳು ಏಕೆ ಜಾರಿಗೆ ಬಂದಿಲ್ಲ? ಎಂಬುದರ ಕುರಿತು ದೇಶಾದ್ಯಂತ ವಿಚಾರ ಮಂಥನ ನಡೆಯಬೇಕು.
- ಅದರ ಆಧಾರದ ಮೇಲೆ ನಿಜಾರ್ಥದಲ್ಲಿ ಜನರಿಗೆ ಆಳುವವರನ್ನು ನಿರ್ಧರಿಸಲು ಮತ್ತು ನಿಯಂತ್ರಿಸಲು ಶಕ್ತಿ ಇರುವಂತಹ, ಜನರು ಸಕ್ರಿಯ ಪಾತ್ರವಹಿಸಲು ಅವಕಾಶವಿರುವಂಥ ರೀತಿಯಲ್ಲಿ ಅಧಿಕಾರದ ರಚನೆಯನ್ನು, ಅಭ್ಯರ್ಥಿಗಳ ಮಾನದಂಡಗಳನ್ನು, ಚುನಾವಣಾ ವಿಧಾನಗಳನ್ನು ಪರಿಷ್ಕರಿಸಬೇಕು ಎಂದು ನಾವು ಒತ್ತಾಯಿಸುತ್ತೇವೆ.
- ಸರಕಾರದ ನಾಮನಿರ್ದೇಶಿಸುವ ಶಾಸಕಾಂಗ, ಆಡಳಿತಾತ್ಮಕ ವಿಭಾಗಗಳಲ್ಲಿ, ನ್ಯಾಯಾಂಗದಲ್ಲಿ, ಶಿಕ್ಷಣದಲ್ಲಿ, ಪೊಲೀಸ್ ಇಲಾಖೆ, ಸೈನ್ಯ, ಗುಪ್ತಚರ ವಿಭಾಗಗಳು, ಉದ್ಯೋಗಾವಕಾಶಗಳಲ್ಲಿ ಎಲ್ಲಾ ಸಾಮಾಜಿಕ ವರ್ಗಗಳಿಗೆ ಅವುಗಳ ಜನಸಂಖ್ಯೆಯ ಆಧಾರದಲ್ಲಿ ಪ್ರಾತಿನಿಧ್ಯ ಲಭಿಸಲು ಎಲ್ಲಾ ಕ್ರಮಗಳನ್ನು ಕೈಗೊಳ್ಳಬೇಕು.

# 2. ನಾವು ಎಂತಹ ಸಮಾಜವನ್ನು ಬಯಸುತ್ತೇವೆ?

ಭಾರತದ ಸಂವಿಧಾನವು ಘೋಷಿಸಿರುವಂತೆ ಸಮಾಜವಾದಿ ಸಮಾಜವನ್ನು ಬಯಸುತ್ತೇವೆ. ಆದರೆ ಆಳುವ ಸರ್ಕಾರಗಳು ಇದನ್ನು ವಿರುದ್ಧ ದಿಕ್ಕಿನಲ್ಲಿ ತೆಗೆದುಕೊಂಡು ಹೋಗುತ್ತಿವೆ. ದಿನೇ ದಿನೇ ದೇಶ ಸಮಾನತೆಯತ್ತ ಸಾಗುವ ಬದಲು ಅಸಮಾನತೆಯನ್ನು ಹೆಚ್ಚಿಸುವತ್ತ ಸಾಗುತ್ತಿದೆ. ಸಂಪತ್ತಿನ ಕಬಳಿಕೆಗೆ ಒಂದು ಮಿತಿಯೇ ಇಲ್ಲವಾಗಿದೆ. 60 ವರ್ಷಗಳ ತರುವಾಯವೂ ಕೋಟ್ಯಾಂತರ ಜನ ಬಡತನ, ಸಾಲ, ನಿರುದ್ಯೋಗ, ಅರೆ ಉದ್ಯೋಗ, ದಿನಗೂಲಿಗಳಡಿ ನರಳಾಡುತ್ತಿದ್ದರೆ, ದೊಡ್ಡ ದೊಡ್ಡ ಕೈಗಾರಿಕೋದ್ಯಮಿಗಳು, ರಾಜಕಾರಣಿಗಳು, ಅಧಿಕಾರಿಗಳು, ಭೂ ಒಡೆಯರು ಮಿತಿ ಇಲ್ಲದಂತೆ ಸಂಪತ್ತನ್ನು ಬಾಚಿ ತಿಜೋರಿಗಳಲ್ಲಿ ತುಂಬಿಕೊಳ್ಳುವಲ್ಲಿ ನಿರತರಾಗಿದ್ದಾರೆ. ವಿವಿಧ ಭಾಷೆ, ಜಾತಿ, ಧರ್ಮ, ಲಿಂಗಗಳ ಜನರ ನಡುವೆ ಸಹಬಾಳ್ವೆಯನ್ನು ಬೆಳೆಸುವ ಬದಲು ಕಚ್ಚಾಟಗಳನ್ನು ಹಚ್ಚಿಡಲಾಗಿದೆ. ಪರಸ್ಪರ ನೆರೆಹೊರೆಯ ರಾಜ್ಯಗಳು ನಿರಂತರ ಜಗಳಾಡುತ್ತಿವೆ. ಐದಾರು ದಶಕಗಳು ಕಳೆದರೂ ನದಿ, ಗಡಿ ವ್ಯಾಜ್ಯಗಳಿಗೆ ಶಾಶ್ವತ ಪರಿಹಾರಗಳನ್ನು ಕಲ್ಪಿಸದೆ, ಒಂದನ್ನು ಇನ್ನೊಂದರ ವಿರುದ್ಧ ಎತ್ತಿಕಟ್ಟಲಾಗಿದೆ.

ದಲಿತರು–ಹಿಂದುಳಿದವರು ಹುಟ್ಟಿನ ಕಾರಣಕ್ಕೆ ಸಮಾಜದ ಕೆಳಸ್ತರಗಳಲ್ಲೆ ಉಳಿಯುವಂಥ ಸ್ಥಿತಿ ಇಂದೂ ಮುಂದುವರೆದಿದೆ. ಪರಸ್ಪರರ ಧರ್ಮ–ನಂಬಿಕೆಗಳ ಬಗ್ಗೆ ಗೌರವದ ಬದಲು ದ್ವೇಷವನ್ನು ಬೆಳೆಸಲಾಗುತ್ತಿದೆ. ಮಹಿಳೆಯನ್ನು ದುಡಿಯಲು ಮನೆಯಿಂದ ಕಂಪನಿಗೆ ಕರೆತರುತ್ತಿದ್ದರೂ, ಅಗ್ಗದ ಕೂಲಿ ನೀಡಿ ವಂಚಿಸುತ್ತಿರುವುದಲ್ಲದೆ, ಲೈಂಗಿಕ ಗೊಂಬೆಯಂತೆ ಚಿತ್ರಿಸಿ ಹಿಂಸೆ ಮತ್ತು ದೌರ್ಜನ್ಯಕ್ಕೆ ಗುರಿ ಮಾಡಿದ್ದಾರೆ. ಮಾರುಕಟ್ಟೆ ಸೃಷ್ಟಿಸುವ ಎಂದಿಗೂ ತಣಿಯದ ಅಗತ್ಯಗಳನ್ನು ಪೂರೈಸಿಕೊಳ್ಳಲು ಅವುಗಳ ಹಿಂದೆ ಯಂತ್ರಗಳಂತೆ ಜನ ಓಡುವಂತೆ ಮಾಡಲಾಗಿದೆ. ನೆಮ್ಮದಿಯ, ಸತ್ವಭರಿತ, ಸೃಜನಶೀಲ ಬದುಕಿನ ಬದಲು, ಸದಾ ಗಳಿಸಲು ಅಥವಾ ಕೊಳ್ಳಲು ಪರದಾಡುತ್ತಿರುವಂಥ ಪರಿಸ್ಥಿತಿಯನ್ನು ನಿರ್ಮಿಸಿದ್ದಾರೆ. ನಮ್ಮ ನೆಲಗಳಲ್ಲಿ ನಮ್ಮ ಮಾತೃ ಭಾಷೆಗಳಲ್ಲಿ ಮಾತನಾಡಿಕೊಳ್ಳಲು ನಾಚಿಕೆ ಪಡುವಂತಹ ಪರಿಸ್ಥಿತಿ ನಿರ್ಮಿಸಲಾಗಿದೆ. ಬ್ರಿಟಿಷರು ಬಿಟ್ಟುಹೋದರೂ ಅವರ ಭಾಷೆ ನಮ್ಮ ಮೇಲೆ ಸವಾರಿ ಮಾಡುತ್ತಿದೆ.

ಮಠ, ಮಸೀದಿಗಳನ್ನು ಮುಂದಿಟ್ಟುಕೊಂಡು ಮೌಢ್ಯದ ಚಿಂತನೆಗಳನ್ನು ಉಳಿಸಿಕೊಂಡು ಬರಲಾಗುತ್ತಿದೆ. ಶಿಕ್ಷಣವೆಂಬುದು ಶಕ್ತಿ ಇದ್ದಷ್ಟು ಕೊಳ್ಳುವ ಅಂಗಡಿಯ ಸರಕಾಗಿಬಿಟ್ಟಿದೆ. ಆರೋಗ್ಯವನ್ನು ಸಹ ಹಣದ ತಕ್ಕಡಿಯಲ್ಲಿ ತೂಗಿ ಕೊಡಲಾಗುತ್ತಿದೆ. ಸರ್ಕಾರಿ ಶಾಲೆಗಳನ್ನು, ಆಸ್ಪತ್ರೆಗಳನ್ನು ನಾಮ ಮಾತ್ರಕ್ಕೆ ಉಳಿಸಿಕೊಳ್ಳುತ್ತಾ, ಈ ಕ್ಷೇತ್ರದ ನಿಯಂತ್ರಣವನ್ನು ಖಾಸಗಿಯವರ ಸುಪರ್ದಿಗೆ ವಹಿಸಲಾಗಿದೆ. ಕೊನೆಗೆ ಬಡವರ ತಟ್ಟೆಯಲ್ಲಿನ ಹಿಡಿ ಅನ್ನದ ಮೇಲೂ ಇವರ ಕಣ್ಣು ಬಿದ್ದಿದೆ. ಸಾರ್ವಜನಿಕ ಆಹಾರ ವಿತರಣಾ ವ್ಯವಸ್ಥೆಯನ್ನು ನಾನಾ ರೀತಿಯ ತರ್ಕ-ಕುತಂತ್ರಗಳ ಮೂಲಕ ನಾಶ ಮಾಡುತ್ತಾ ಜನರು ಅರ್ಧ ಹೊಟ್ಟೆ ಉಂಡರೂ ಸರಿ ಅಂಗಡಿಯಿಂದಲೆ ಕೊಳ್ಳಬೇಕಾದ ಪರಿಸ್ಥಿತಿಯನ್ನು ಸೃಷ್ಟಿಸುತ್ತಿದ್ದಾರೆ. ಎಸ್‌ಇಝೆಡ್ ಹೆಸರಲ್ಲಿ ರೈತರ ಭೂಮಿ ಕಸಿದವರಿಗೆ ಕೊಟ್ಯಾಂತರ ತೆರಿಗೆ ವಿನಾಯಿತಿ, ವಿದೇಶಕ್ಕಾಗಿ ಉತ್ಪಾದಿಸುವವರಿಗೆ ತೆರಿಗೆ ವಿನಾಯಿತಿ, ಕೋಟ್ಯಾಂತರ ಆಸ್ತಿಯಿದ್ದರೂ ಅವರಿಗೆ ಹೆಚ್ಚೆಚ್ಚು ವಿನಾಯಿತಿ. ಆದರೆ ಜನರ ಭಾಗ್ಯಜ್ಯೋತಿಗೂ ಬಿಲ್ ಅಂಟಿಸಿದ್ದಾರೆ, ಸಾಮಾನ್ಯರ ಹಣತೆಯ ಸೀಮೆಎಣ್ಣೆ ಬೆಲೆಯನ್ನು ಹತ್ತು ಪಟ್ಟು ಹೆಚ್ಚಿಸಿದ್ದಾರೆ, ನೀರಿಗೆ, ಕರೆಂಟಿಗೆ ಮೀಟರ್ ಅಳವಡಿಸಿದ್ದಾರೆ, ಬೆಲೆ ಹೆಚ್ಚಿಸಿದ್ದಾರೆ. ಇದನ್ನೆಲ್ಲ ಮಾಡಿದವರು ಯಾರು? ಪಕ್ಷಾತೀತವಾಗಿ ಇದೇ ರಾಜಕಾರಣಿಗಳೆ. ಇವರಿಗೆ ದಾರಿ ತೋರುತ್ತಿರುವುದು ಬುದ್ಧ-ಬಸವ-ಗಾಂಧಿ-ಅಂಬೇಡ್ಕರ್‌ರವರಲ್ಲ, ಬದಲಿಗೆ ಬುಶ್-ಬಿರ್ಲಾ-ಟಾಟಾ-ನಾರಾಯಣ ಮೂರ್ತಿ-ಮಲ್ಯ ಮುಂತಾದವರು. ಇವರು ಪಾಲಿಸುತ್ತಿರುವುದು ಸಂವಿಧಾನದಲ್ಲಿ ಘೋಷಿಸಿಕೊಂಡಿರುವ ಕರ್ತವ್ಯಗಳನ್ನೂ ಅಲ್ಲ. ಡಬ್ಲ್ಯುಟಿಒ, ಐಎಂಎಫ್, ವಿಶ್ವಬ್ಯಾಂಕ್ ವಿಧಿಸಿರುವ ಕಟ್ಟಳೆಗಳನ್ನು.

ಇದು ಬದಲಾಗಬೇಕು. ಜನರ ಪರವಾದ ಪ್ರಜಾಪ್ರಭುತ್ವ, ಜನರ ಪರವಾದ ಸಮಾಜವನ್ನು ನಿರ್ಮಾಣ ಮಾಡುತ್ತದೆ. ಸಮಾನತೆ ಮತ್ತು ಸಹಬಾಳ್ವೆಯನ್ನು ಹೊಂದಿರುವ, ಸೃಜನಶೀಲತೆಗೆ ವಿಪುಲ ಅವಕಾಶವಿರುವ ಶಿಕ್ಷಿತ, ಜಾಗೃತ, ಆರೋಗ್ಯವಂತ ಸಮಾಜವನ್ನು ನಾವು ಬಯಸುತ್ತೇವೆ.

❍ ಅಸಮಾನತೆ, ಅಧೀನತೆ ಹಾಗೂ ಅಮಾನವೀಯತೆಯೆಡೆಗೆ ಸಾಗುತ್ತಿರುವ ಸಮಾಜದ ಈ ನಡಿಗೆಯನ್ನು ನಾವು ತೀವ್ರವಾಗಿ ವಿರೋಧಿಸುತ್ತೇವೆ. ಬಲಾಢ್ಯರ ಹಿತವನ್ನಲ್ಲದೆ ದುರ್ಬಲರ ಹಿತವನ್ನು ಲಕ್ಷ್ಯದಲ್ಲಿಟ್ಟುಕೊಂಡಿರುವ, ಅಸಮಾನತೆಯನ್ನಲ್ಲದೆ ಸಮಾನತೆಯನ್ನು ಗುರಿಯಾಗಿಟ್ಟುಕೊಂಡಿರುವ, ದ್ವೇಷವನ್ನಲ್ಲದೆ ಪರಸ್ಪರ ಪ್ರೀತಿಯನ್ನು ಹೃದಯದಲ್ಲಿಟ್ಟುಕೊಂಡಿರುವ, ಅತಂತ್ರತೆಯನ್ನಲ್ಲದೆ ಬದುಕಿಗೆ ಭದ್ರತೆಯನ್ನು ನೀಡುವ ಸಾಮಾಜಿಕ ನೀತಿಗಳನ್ನು ರೂಪಿಸಲು, ಸಮಾಜದ ಮುಖವನ್ನು ಮಾರುಕಟ್ಟೆಯಿಂದ ಮಾನವೀಯತೆಯೆಡೆಗೆ ತಿರುಗಿಸಲು ನಾವು ಆಗ್ರಹಿಸುತ್ತಿದ್ದೇವೆ.

# 3. ನಾವು ಎಂತಹ ಅಭಿವೃದ್ಧಿಯನ್ನು ಬಯಸುತ್ತೇವೆ?

ಇತ್ತೀಚಿನ ವರ್ಷಗಳಲ್ಲಿ ಎಲ್ಲಾ ಪಕ್ಷಗಳೂ, ಕೇಂದ್ರ-ರಾಜ್ಯ ಸರ್ಕಾರಗಳೂ ಅಭಿವೃದ್ಧಿಯ ಮಾತನಾಡುತ್ತಿವೆ. ಒಬ್ಬರಿಗಿಂತ ಒಬ್ಬರು ಹೆಚ್ಚಿನ ಅಭಿವೃದ್ಧಿಯನ್ನು ಸಾಧಿಸುವುದಾಗಿ ವಾದಿಸುತ್ತಿದ್ದಾರೆ. ಜನಸಾಮಾನ್ಯರಾದ ನಾವು ಸಹ ದೇಶದ, ನಮ್ಮ ರಾಜ್ಯದ ಅಭಿವೃದ್ಧಿಯನ್ನು ಬಯಸುತ್ತೇವೆ. ಆದರೆ ಅಭಿವೃದ್ಧಿಯ ಅರ್ಥ ಈಗಿರುವುದಕ್ಕಿಂತ ಬೇರೆ ರೀತಿಯಲ್ಲಿರಬೇಕೆಂದು ಬಯಸುತ್ತೇವೆ. ವಿಮಾನಗಳು, ಎಲೆಕ್ಟ್ರಾನಿಕ್ ಯಂತ್ರಗಳು, ಮೊಬೈಲ್ ಫೋನ್‌ಗಳು, ಸರಕು ತುಂಬಿದ ಮಾಲ್‌ಗಳು, ಫ್ಲೈಓವರ್‌ಗಳು, ಐಟಿ-ಬಿಟಿ ಕಂಪನಿಗಳು ಹೆಚ್ಚಾಗುತ್ತಿವೆ, ಶೇರು ಮಾರುಕಟ್ಟೆ ಬೆಳೆಯುತ್ತಿದೆ, ಕೋಟ್ಯಾಧೀಶರ ಕೋಟಿಗಳು, ಕೋಟೆಗಳು ಹೆಚ್ಚಾಗುತ್ತಿವೆ ನಿಜ. ಆದರೆ ಇವನ್ನೇ ರಾಜ್ಯದ ಅಭಿವೃದ್ಧಿ ಎಂದು ಕರೆಯಲು ಸಾಧ್ಯವೆ? ಖಂಡಿತ ಇಲ್ಲ. ನಮ್ಮ ಪ್ರಕಾರ ಅಭಿವೃದ್ಧಿಯೆಂದರೆ ಜನಸಾಮಾನ್ಯರ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಬದುಕಿನ ಏಳಿಗೆ. ದೇಶದ-ರಾಜ್ಯದ ಆರ್ಥಿಕತೆಯ ಸ್ವಾವಲಂಬನೆ, ವಿವಿಧ ಪ್ರಾಂತ್ಯಗಳ-ಕ್ಷೇತ್ರಗಳ-ಜನ ವರ್ಗಗಳ ನಡುವಿನ ಅಂತರವನ್ನು ಕಡಿಮೆಗೊಳಿಸುವ ಬೆಳವಣಿಗೆ, ಪರಿಸರ ಸಮತೋಲನವನ್ನು ಕಾಪಾಡುವಂತಹ ಯೋಜನೆಗಳು, ಜನರ ಪ್ರಜಾತಾಂತ್ರಿಕ ಹಕ್ಕುಗಳನ್ನು ಗೌರವಿಸುವಂತಹ ಅಭಿವೃದ್ಧಿ.

ಆದರೆ ಈ ದೇಶದ/ರಾಜ್ಯದ ಅಭಿವೃದ್ಧಿ ಎತ್ತ ಸಾಗಿದೆ? ಆರ್ಥಿಕ ಅಭಿವೃದ್ಧಿಯ ವಿಚಾರಕ್ಕೆ ಬರುವುದಾದರೆ ಕಳೆದ 10 ವರ್ಷಗಳ ನಮ್ಮ ದೇಶದ ಪರಿಸ್ಥಿತಿಯನ್ನು ನೋಡಿದರೆ, ಇಲ್ಲಿ ಶತಕೋಟ್ಯಾಧಿಪತಿಗಳ ಸಂಖ್ಯೆ ಹೆಚ್ಚಿದೆ. ಪ್ರಪಂಚದ ಅತೀ ಹೆಚ್ಚು ಶ್ರೀಮಂತರ ಪಟ್ಟಿಯಲ್ಲಿ 'ಭಾರತೀಯರ' ಹೆಸರುಗಳು ಸೇರ್ಪಡೆಯಾಗುತ್ತಿವೆ. ಅದೇ ಸಂದರ್ಭದಲ್ಲಿ ಈ ದೇಶದಲ್ಲಿ ಆತ್ಮಹತ್ಯೆ ಮಾಡಿಕೊಳ್ಳುತ್ತಿರುವ ರೈತರ ಸಂಖ್ಯೆ ಲಕ್ಷಗಳಲ್ಲಿದೆ. ಭಾರತದ ಕೆಲವು ರಾಜ್ಯಗಳಲ್ಲಿ ಹಸಿವಿನಿಂದ ಜನರು ಸಾಯುತ್ತಿರುವ ಪರಿಸ್ಥಿತಿ ಇಂದಿಗೂ ಮುಂದುವರಿಯುತ್ತಿದೆ. ಅಭಿವೃದ್ಧಿ ಯೋಜನೆಯ ಹೆಸರಿನಲ್ಲಿ ಆದಿವಾಸಿಗಳು ತಮ್ಮ ಪರಂಪರಾಗತ ವಾಸಸ್ಥಳಗಳಿಂದ ಎತ್ತಂಗಡಿಯಾಗುತ್ತಿದ್ದಾರೆ. ದೇಶದ ದೊಡ್ಡ ಬಂಡವಾಳಶಾಹಿಗಳು ಮತ್ತು ಬಹುರಾಷ್ಟ್ರೀಯ ಕಂಪೆನಿಗಳು ಸಾವಿರಾರು ಎಕರೆಗಳ ಭೂಮಿಯನ್ನು ಕಬಳಿಸುತ್ತಿದ್ದಾರೆ.

ಈ ಹಿಂದಿನ ಅಧ್ಯಾಯದಲ್ಲಿ ಹೇಳಿರುವಂತೆ ಬಹುಸಂಖ್ಯಾತ ಜನತೆ ಮಿಕ್ಕವರಿಗಿಂತ ಸಂಕಷ್ಟದಲ್ಲಿರುವಾಗ ಪ್ರಜಾಪ್ರಭುತ್ವ ವ್ಯವಸ್ಥೆಯ ಸರ್ಕಾರಗಳು ತಮ್ಮ ಎಲ್ಲಾ ನೀತಿಗಳನ್ನು ಆ ಬಹುಸಂಖ್ಯಾತ ಸಾಮಾನ್ಯ ಜನತೆಯ ಪರವಾಗಿ ರೂಪಿಸಬೇಕು. ಒಂದೇ ದೇಶದಲ್ಲಿ ಕೂಳಿಲ್ಲದೆ ಸಾಯುವವರು ಮತ್ತು ವೈಭೋಗದಲ್ಲಿ ಮೆರೆಯುವವರು ಇರದಂತೆ ನೋಡಿಕೊಳ್ಳಬೇಕು. ಸಂಪತ್ತು ಕೆಲವರಲ್ಲೇ ಹೆಚ್ಚೆಚ್ಚು ಶೇಖರಣೆ ಆಗದಂತೆ ನಿರ್ಬಂಧ ವಿಧಿಸಬೇಕು. ಆದರೆ ಇಂದು ನಮ್ಮ ಸರ್ಕಾರಗಳು ಮಾಡುತ್ತಿರುವ 'ಅಭಿವೃದ್ಧಿ' ಅವರ ಸಂಪತ್ತನ್ನು ಹೆಚ್ಚಿಸುತ್ತಲೇ ಹೋಗುತ್ತಿದೆ. ಹಳ್ಳಿ ಮತ್ತು ಪಟ್ಟಣಗಳ ನಡುವೆ, ದೊಡ್ಡ ನಗರಗಳು ಮತ್ತು ಸಣ್ಣ ಪಟ್ಟಣಗಳ ನಡುವೆ, ಪಟ್ಟಣಗಳಲ್ಲಿ ಐಶಾರಾಮಿ ಪ್ರದೇಶಗಳು ಮತ್ತು ಸ್ಲಂಗಳ ನಡುವೆ, ರಾಜ್ಯದ ವಿವಿಧ ಪ್ರದೇಶಗಳ ನಡುವೆ ಅಂತರವನ್ನು ಹೆಚ್ಚಿಸುತ್ತಿದೆ. ಇದಲ್ಲದೆ ನಗರಗಳು ವಾಸ ಮಾಡಲಾಗದ, ಜನರು ನೆಮ್ಮದಿಯಿಂದ ಸಂಚರಿಸಲಾಗದ ಸಮಸ್ಯೆಯ ಆಗರಗಳಾಗುತ್ತಿವೆ. ವಿಪರೀತ ವಾಹನ ದಟ್ಟಣೆಯಿಂದ ಸುಲಭ ಸಂಚಾರವೆನ್ನುವುದು ಕನಸಿನ ಮಾತು. ಹೆಚ್ಚುತ್ತಿರುವ ಟ್ರಾಫಿಕ್ ಸಮಸ್ಯೆಯನ್ನು ಪರಿಹರಿಸಲು ಆಯ್ದ ಪ್ರದೇಶಗಳಲ್ಲಿ ರಸ್ತೆ ಅಗಲೀಕರಣದ, ಫ್ಲೈಓವರ್‌ನ ಪ್ರಾಜೆಕ್ಟ್‌ಗಳು ಬರುತ್ತಿವೆ. ಸಮಸ್ಯೆಯ ಮೂಲ ಕಾರಣವಾದ ಅಸಮಾನ ಅಭಿವೃದ್ಧಿಯ ದಿಕ್ಕನ್ನು ಬದಲಾಯಿಸದಿದ್ದರೆ, ಎಷ್ಟೇ ರಸ್ತೆ ಅಭಿವೃದ್ಧಿ ಮಾಡಿದರೂ, ಮೆಟ್ರೋ ಮಾನೋ ರೈಲುಗಳು ಬಂದರೂ ಪರಿಹಾರ ಸಾಧ್ಯವಿಲ್ಲ.

ಇನ್ನು ಈ ಅಭಿವೃದ್ಧಿ ದೇಶದ, ರಾಜ್ಯದ ಸ್ವಾವಲಂಬನೆಯನ್ನು ಹೆಚ್ಚಿಸುವ ಗುರಿಯನ್ನಾದರೂ ಹೊಂದಿದೆಯೇ ಎಂದರೆ ಅದೂ ಇಲ್ಲ. ಸಾಮ್ರಾಜ್ಯಶಾಹಿ ಸಂಚಿನಿಂದ ಜಾರಿಗೆ ಬಂದ ಜಾಗತೀಕರಣವನ್ನು ಎಲ್ಲಾ ಪಕ್ಷಗಳೂ ಒಪ್ಪಿಕೊಂಡಾಗಿದೆ. ವಿಶ್ವಬ್ಯಾಂಕ್ ಮತ್ತು ಐಎಂಎಫ್ ಹೇರಿರುವ ಶರತ್ತುಗಳಿಗೆ ಸಹಿ ಹಾಕಲಾಗಿದೆ. ಡಬ್ಲ್ಯುಟಿಒ ಕೂಟಕ್ಕೆ ಸೇರಾಗಿದೆ. ಈ ಎಲ್ಲಾ ಸಂಸ್ಥೆ ಮತ್ತು ಒಪ್ಪಂದಗಳ ತಿರುಳೆಂದರೆ ಭಾರತದ ಎಲ್ಲಾ ಕ್ಷೇತ್ರಗಳಲ್ಲೂ ಮುಕ್ತವಾಗಿ ಪ್ರವೇಶಿಸಲು ವಿದೇಶಿ ಮತ್ತು ಖಾಸಗೀ ಕಂಪನಿಗಳಿಗೆ ಅವಕಾಶ ನೀಡುವುದು. ಸರ್ಕಾರ ಸಾಮಾಜಿಕ ಜವಾಬ್ದಾರಿಯ ಕರ್ತವ್ಯವನ್ನು ಹಂತಹಂತವಾಗಿ ಕೈಬಿಡುವುದು. ಸಾರ್ವಜನಿಕ ಉದ್ದೇಶದ ಖರ್ಚುಗಳನ್ನು ಕಡಿತಗೊಳಿಸುವುದು. ಆ ಹಣವನ್ನು ವ್ಯಾಪಾರದ ವಿಸ್ತರಣೆಗೆ ನೆರವಾಗುವ ಮೂಲಸೌಕರ್ಯಗಳನ್ನು ಮಾಡಿಕೊಡಲು ವಿನಿಯೋಗಿಸುವುದು. ನಿಚ್ಚಳವಾಗಿ ಎಲ್ಲಾ ರಾಜ್ಯಗಳ, ಕೇಂದ್ರದ ಸರ್ಕಾರಗಳು ಈ ಹಾದಿಯನ್ನೇ ಹಿಡಿದಿದೆ. ಹಾಗಾಗಿಯೇ ಶಿಕ್ಷಣ, ಆಹಾರ, ಆರೋಗ್ಯ, ಬ್ಯಾಂಕಿಂಗ್, ನೀರು, ವಿದ್ಯುತ್, ಸಾರಿಗೆ, ಸಂಪರ್ಕ ಇತ್ಯಾದಿ ಎಲ್ಲಾ ಕ್ಷೇತ್ರಗಳಿಂದ ಸರ್ಕಾರಗಳು ಹಿಂದೆ ಸರಿಯುತ್ತಿವೆ. ಎಲ್ಲಾ ಕ್ಷೇತ್ರದಲ್ಲಿ ಖಾಸಗಿಯವರ ಪಾತ್ರ ಹೆಚ್ಚಾಗುತ್ತಿದೆ. ಎಲ್ಲಾ ಸಾರ್ವಜನಿಕ ಸೇವೆಗಳೂ ಜನರಿಗೆ ದುಬಾರಿಗೊಳ್ಳುತ್ತಿವೆ. ಸಾರಾಂಶದಲ್ಲಿ ವಿದೇಶಿ ಮತ್ತು ದೇಶಿ ಬೃಹತ್ ಕಾರ್ಪೋರೇಟ್ ಕಂಪನಿಗಳ ಹಿತಾಸಕ್ತಿಗಳನ್ನು ಎತ್ತಿ ಹಿಡಿಯುವ ಜಾಗತೀಕರಣ ಎಂಬ ನೀತಿ ಎಲ್ಲ ಸರ್ಕಾರಗಳ ಅಂತರಾಳದ ನೀತಿಯಾಗಿದೆ. ಎಲ್ಲಾ ಪಕ್ಷಗಳೂ ಇದರ ವಿರುದ್ಧ ಚಕಾರವೆತ್ತುವದರ ಬದಲಿಗೆ ಅದರ ವಕ್ತಾರರಾಗಿ ಜನತೆಗೆ ದ್ರೋಹ ಬಗೆಯುತ್ತಿವೆ.

ಇದಲ್ಲದೆ ರಾಜ್ಯದಲ್ಲಿನ ಚಿಕ್ಕಪುಟ್ಟ ಕೈಗಾರಿಕೋದ್ಯಮಿಗಳನ್ನು, ವ್ಯಾಪಾರಿಗಳನ್ನು ರಕ್ಷಿಸಿ ಪೋಷಿಸುವ ಬದಲು ದೇಶದ ಮಾರ್ವಾಡಿ, ಬನಿಯಾ ಇತ್ಯಾದಿ ಬಂಡವಾಳಿಗರನ್ನು ನಮ್ಮ ಆರ್ಥಿಕತೆಯ ಮೇಲೆ ಹಿಡಿತ ಹೊಂದಲು ಬರಮಾಡಲಾಗುತ್ತಿದೆ.

ಪೆಟ್ರೋಲಿಯಮ್‌ನಲ್ಲಿ ಶೆಲ್, ರಿಲೆಯನ್ಸ್ ಕಂಪನಿಗಳು ಕೈಕಾಲು ಚಾಚುತ್ತಿವೆ. ಚಿಲ್ಲರೆ ವ್ಯಾಪಾರದಲ್ಲಿ ರಿಲೆಯನ್ಸ್, ಬಿರ್ಲಾ ಮುಂತಾದ ಕಾರ್ಪೊರೇಟ್ ಗೂಳಿಗಳು ನುಗ್ಗುತ್ತಿವೆ. ಕರ್ನಾಟಕದ ಲಕ್ಷಕ್ಕೂ ಹೆಚ್ಚು ಸಣ್ಣ ಕೈಗಾರಿಕೆಗಳು ರೋಗಗ್ರಸ್ತವಾಗಿವೆ. ಒಟ್ಟಾರೆಯಾಗಿ ದೇಶೀಯ ಮತ್ತು ಸಣ್ಣ ಕೈಗಾರಿಕೆ/ವ್ಯಾಪಾರವನ್ನು ರಕ್ಷಿಸಲಾಗುತ್ತಿಲ್ಲ. ಬದಲಿಗೆ ಅಖಿಲ ಭಾರತೀಯ ಮತ್ತು ಅಂತರ್‌ರಾಷ್ಟ್ರೀಯ ದೈತ್ಯರ ಮರ್ಜಿಗೆ ಅಖಾಡವನ್ನು ಬಿಟ್ಟುಕೊಡಲಾಗಿದೆ. ಗಾಂಧೀವಾದದ ಮಾತನಾಡುವ ಕಾಂಗ್ರೆಸ್, ದೇಶಭಕ್ತಿಯ ಮಾತನಾಡುವ ಬಿಜೆಪಿ, ರೈತಪರ ಕಾಳಜಿಯ ಸೋಗು ಹಾಕುವ ಜನತಾದಳ ಎಲ್ಲವೂ ತಮ್ಮ ಬಾಲಗಳನ್ನು ಮಡಚಿ ಇವರ ಸೇವೆಯಲ್ಲಿ ತೊಡಗಿಸಿಕೊಂಡಿವೆ.

## ಜನತೆಯ ಹಕ್ಕೊತ್ತಾಯಗಳು

- ಜನವಿರೋಧಿಯಾದ, ಅಸಮತೋಲನವನ್ನು ಬೆಳೆಸುತ್ತಿರುವ, ರಾಜ್ಯದ/ದೇಶದ ಹಿತಾಸಕ್ತಿಯನ್ನು ಹರಾಜಿಗೆ ಹಾಕುತ್ತಿರುವ, ಪರಿಸರ ನಾಶಗೈಯ್ಯುವ, ಪ್ರಜಾತಾಂತ್ರಿಕ ಮೌಲ್ಯಗಳಿಗೆ ಬೆಲೆ ನೀಡದ, ಜನರನ್ನು ಬವಣೆಗೆ ತಳ್ಳಿ-ಜನವಿರೋಧಿಗಳನ್ನು ಕೋಟ್ಯಾಧಿಪತಿಗಳನ್ನಾಗಿ ಬೆಳೆಸುವ ಈ ಅಭಿವೃದ್ಧಿ ಮಾದರಿಯನ್ನು ನಾವು ತೀವ್ರವಾಗಿ ವಿರೋಧಿಸುತ್ತಿದ್ದೇವೆ. ತಾರತಮ್ಯಕ್ಕೊಳಗಾದ ಶೋಷಿತ ಸಮುದಾಯಗಳ ಅಭಿವೃದ್ಧಿಯೇ ನಿಜವಾದ ಅಭಿವೃದ್ಧಿ ಹೊರತು- ಭವ್ಯ ಸೌಧಗಳು, ವಿದೇಶೀ ಕಾರುಗಳು, ಖಾಸಗಿ ವಿಮಾನ ಮತ್ತು ಹೆಲಿಕಾಪ್ಟರ್‌ಗಳೇ ಅಭಿವೃದ್ಧಿಯ ಸಂಕೇತಗಳಲ್ಲ. ಸರ್ಕಾರದ ಒಟ್ಟು ನೀತಿಗಳು ಜನಪರವಾಗಿ ಬದಲಾಗಬೇಕು, ಸಮಾನ ಬೆಳವಣಿಗೆಯ ಗುರಿ ಹೊಂದಿರಬೇಕು, ಸ್ಥಳೀಯ ಆರ್ಥಿಕತೆಗಳನ್ನು ರಕ್ಷಿಸುವ ಮತ್ತು ಅಭಿವೃದ್ಧಿಪಡಿಸುವ ಲಕ್ಷ್ಯಹೊಂದಿರಬೇಕು, ಪರಿಸರ ಸ್ನೇಹಿಯಾಗಿರಬೇಕು, ಜನರ ಅಭಿಪ್ರಾಯಕ್ಕೆ ಗರಿಷ್ಠ ಬೆಲೆ ನೀಡುವುದಾಗಿರಬೇಕು.

- ಬಲಾಢ್ಯರು ಬಲಹೀನರನ್ನು ನುಂಗುವ ನೀತಿಯುಳ್ಳ ಜಾಗತೀಕರಣದಿಂದ ಹೊರಬರಬೇಕು. ಜನಹಿತವನ್ನು ಕೈಬಿಟ್ಟಿರುವ ಖಾಸಗೀಕರಣದ ಓಟವನ್ನು ನಿಲ್ಲಿಸಬೇಕು. ಡಬ್ಲ್ಯುಟಿಒದಿಂದ ಹೊರಬರಬೇಕು. ಸಾರ್ವಜನಿಕ ಕ್ಷೇತ್ರಗಳಲ್ಲಿ ಸರ್ಕಾರದ ಪಾಲುದಾರಿಕೆ ಹೆಚ್ಚಾಗಬೇಕು.

- ಈ ನಾಡಿನ ಮತ್ತು ಸರ್ಕಾರದ ಸಂಪತ್ತು ಜನ ಸಾಮಾನ್ಯರ ಕಡೆ ಹರಿಯಬೇಕು. ಶ್ರೀಮಂತರ ಸಾಮ್ರಾಜ್ಯದ ವಿಸ್ತರಣೆಗೆ, ಸಂಪತ್ತಿನ ಶೇಖರಣೆಗೆ ಕಡಿವಾಣ ಬೀಳಬೇಕು.

# 4. ಜನತೆಯ ಪ್ರಣಾಳಿಕೆಯಲ್ಲಿ ಜನರ ಮುಖ್ಯ ಹಕ್ಕೊತ್ತಾಯಗಳು

## ರೈತರು–ಅನಾಥರಾಗಿರುವ ಅನ್ನದಾತರು

ಅನ್ನ ನೀಡುವ ಅನ್ನದಾತರು ಆತ್ಮಹತ್ಯೆಯ ಹಾದಿ ಹಿಡಿದಿದ್ದಾರೆ. ಪ್ರಜಾಪ್ರಭುತ್ವವೆಂದು ಕರೆಸಿಕೊಳ್ಳುವ ದೇಶಕ್ಕೆ ಇದಕ್ಕಿಂತ ನಾಚಿಕೆಗೇಡಿನ ಸಂಗತಿ ಇನ್ನೊಂದಿರಲಾರದು. ಇಂದು ನಾಡಿನಲ್ಲಿ ಅತ್ಯಂತ ದುರ್ಭರ ಪರಿಸ್ಥಿತಿಯಲ್ಲಿರುವುದು ರೈತ ಸಮುದಾಯ. ಎಲ್ಲಾ ಪಕ್ಷಗಳು ತಮ್ಮನ್ನು ರೈತಪರ ಎಂದು ಬಿಂಬಿಸಿಕೊಳ್ಳುತ್ತಾರೆ. ರೈತನೇ ದೇಶದ ಬೆನ್ನೆಲುಬು ಎನ್ನುತ್ತಾ, ಆ ಬೆನ್ನೆಲುಬನ್ನು ಮುರಿಯಲು ಸಾಕಷ್ಟು ನೀತಿಗಳನ್ನು ರೂಪಿಸುತ್ತಾರೆ. ಕೇಂದ್ರದ ಯುಪಿಎ ಸರ್ಕಾರವು ಸುಮಾರು 50,000 ಕೋಟಿಗಳಷ್ಟು ರೈತರ ಸಾಲ ಮನ್ನಾ ಮಾಡುವುದಾಗಿ ಪ್ರಕಟಿಸಿದೆ. ಜನತಾದಳ–ಬಿಜೆಪಿ ಮೈತ್ರಿ ಸರ್ಕಾರವು 25,000 ರೂವರೆಗಿನ ರೈತರ ಸಾಲವನ್ನು ಹಲವಾರು ಶರತ್ತುಗಳಿಗೊಳಪಟ್ಟು ಮನ್ನಾ ಮಾಡಿತು. ಚುನಾವಣೆಯನ್ನೇ ಗಮನದಲ್ಲಿಟ್ಟುಕೊಂಡು ಮಾಡಿರುವ ಈ ಎರಡೂ ಮನ್ನಾಗಳು ಸಂಕಷ್ಟದಲ್ಲಿರುವ ಒಂದಷ್ಟು ರೈತರಿಗೆ ಸಮಾಧಾನ ತಂದಿದ್ದರೂ, ಸಾಲದಲ್ಲಿರುವ ಬಹುತೇಕ ರೈತರಿಗೆ ಇದರಿಂದ ಪ್ರಯೋಜನವಾಗಿಲ್ಲ. ಏಕೆಂದರೆ ಸರ್ಕಾರಿ ಬ್ಯಾಂಕುಗಳು ಕೊಟ್ಟಿರುವ ಸಾಲವೇ ಕಡಿಮೆ ಇದ್ದು, ಹೆಚ್ಚಿನ ಸಾಲವನ್ನು ಖಾಸಗಿ ಲೇವಾದೇವಿಗಾರರ ಬಳಿ ಮಾಡಲಾಗಿದೆ. ಎಲ್ಲಾ ರಾಜಕೀಯ ಪಕ್ಷಗಳು ಜಾಗತೀಕರಣದ ನೀತಿಗಳ ಭಾಗವಾಗಿ ಬ್ಯಾಂಕುಗಳು ಸಾಮಾಜಿಕ ಕರ್ತವ್ಯದ ಭಾಗವಾಗಿ ರೈತರಿಗೆ, ಬಡವರಿಗೆ ಸಾಲ ನೀಡಬೇಕೆಂಬ ನಿಯಮವನ್ನು ತೆಗೆದುಹಾಕಿದವು. ಲಾಭ ಇರುವ ಕಡೆ ವ್ಯವಹಾರ ನಡೆಸುವ ಮುಕ್ತ ಅವಕಾಶವನ್ನು ಕಲ್ಪಿಸಿಕೊಟ್ಟವು. ಇದರಿಂದಾಗಿ ರೈತರಿಗೆ ದೊರಕುವ ಸಾಲಗಳು, ಅದರಲ್ಲೂ ಸಣ್ಣ ಮತ್ತು ಮಧ್ಯಮ ರೈತರಿಗೆ ದೊರಕುವ ಬ್ಯಾಂಕ್ ಸಾಲಗಳು ಮತ್ತೂ ಕಡಿಮೆಯಾದವು.

ನ್ಯಾಶನಲ್ ಸ್ಯಾಂಪಲ್ ಸರ್ವೆ ಪ್ರಕಾರ ಶೇ.87ರಷ್ಟು ಅತೀ ಸಣ್ಣ ರೈತರಿಗೆ, ಶೇ. 69ರಷ್ಟು ಮಧ್ಯಮ ರೈತರಿಗೆ ಈ ಬ್ಯಾಂಕ್ ಸಾಲಗಳು ಮುಟ್ಟೇ ಇಲ್ಲ. ಹಾಗಾಗಿ ಸಾಲ ಮನ್ನಾಗಳು ರೈತಾಪಿಯ, ವಿಶೇಷವಾಗಿ ಸಣ್ಣ ಮತ್ತು ಮಧ್ಯಮ ಸ್ತರದ ರೈತಾಪಿಯ ಸಮಸ್ಯೆಗಳನ್ನು ಪರಿಹರಿಸುವುದಿಲ್ಲ.

ಸಾಲವೇ ಬೇಕಿಲ್ಲದ ಅಥವಾ ಸಾಲ ಮನ್ನಾ ಬೇಕಿಲ್ಲದ ಪರಿಸ್ಥಿತಿಯನ್ನು ತರಬೇಕೆಂದರೆ, ರೈತರು ಬೆಳೆಯುವ ಎಲ್ಲಾ ಬೆಳೆಗಳಿಗೆ ವೈಜ್ಞಾನಿಕ ಬೆಲೆಯನ್ನು ನಿಗದಿ ಮಾಡಬೇಕು. ಉತ್ಪಾದನಾ ವೆಚ್ಚ ತಗ್ಗಿಸಬೇಕು ಮತ್ತು ಸರಿಯಾದ ಮಾರುಕಟ್ಟೆ ಒದಗಿಸಬೇಕು. ಅದನ್ನು ಯಾವ ಸರ್ಕಾರವೂ ಮಾಡುತ್ತಿಲ್ಲ. ಆದರೆ ಸಾಲ ಮನ್ನಾದ ಘೋಷಣೆಯು ಜನಪ್ರಿಯವಾಗುತ್ತದಾದ್ದರಿಂದ ಆಗಾಗ ಅದನ್ನು ಮಾಡಿ ಕೈತೊಳೆದುಕೊಳ್ಳುವುದೇ ಅವರಿಗೆ ಸುಲಭವಾಗಿದೆ. ಈ ಸಾಲಮನ್ನಾಕ್ಕೂ ಅಡ್ಡಗಾಲು ಹಾಕಿದ್ದ ಬಿಜೆಪಿ ಪಕ್ಷವು ರೈತ ಸಮಾವೇಶಗಳನ್ನು ಮಾತ್ರ ಭರ್ಜರಿಯಾಗಿ ನಡೆಸಿದೆ. ಕೇಂದ್ರದಲ್ಲಿ ಬಿಜೆಪಿ ನೇತೃತ್ವದ ಸರ್ಕಾರವಿದ್ದಾಗಲೇ ಅತ್ಯಂತ ಹೆಚ್ಚಿನ ರೈತ ವಿರೋಧಿ ವಿದೇಶೀ ಕಂಪೆನಿಗಳ ಪರ ನೀತಿಯನ್ನು ಜಾರಿಗೆ ತರಲಾಯಿತೆಂಬುದನ್ನು ರೈತರಾದ ನಾವು ಮರೆತಿಲ್ಲ. ಆತ್ಮಹತ್ಯೆ ಮಾಡಿಕೊಳ್ಳುತ್ತಿರುವ ನಮ್ಮ ಸಮುದಾಯದವರಲ್ಲಿ ಶೇ.99ರಷ್ಟು 'ಹಿಂದೂ'ಗಳೇ ಇದ್ದೇವೆ. ಹಿಂದೂಗಳ ಪರ ಹೋರಾಟ ಮಾಡುತ್ತೇವೆಂದು ಹೇಳುವ ಇದೇ ಬಿಜೆಪಿಯ ಸಂಘಪರಿವಾರದ ಭಜರಂಗದಳ, ವಿಶ್ವ ಹಿಂದೂ ಪರಿಷತ್‌ನಂತಹ ಮುಂಡು ಸಂಘಟನೆಗಳು, ನಮ್ಮ ಸಂಕಷ್ಟಗಳ ಪರಿಹಾರಕ್ಕಾಗಿ ಎಂದೂ ಹೋರಾಟ ಮಾಡಲಿಲ್ಲ ಎಂಬುದೂ ನಮ್ಮ ನೆನಪಿನಲ್ಲಿದೆ.

ಭೂ ಸುಧಾರಣೆಗಳು ಭೂ ಹಿಡುವಳಿಯಲ್ಲಿ ಕೆಲವು ಬದಲಾವಣೆಗಳನ್ನು ತಂದಿದ್ದರೂ, ಭೂ ಸುಧಾರಣೆ ಎಂಬುದಿನ್ನೂ ಪೂರ್ತಿಯಾಗಿ ಜಾರಿಯಾಗಿಲ್ಲ. ತಲೆಮಾರುಗಳಿಂದ ಮಣ್ಣಿನಲ್ಲೇ ಕೆಲಸ ಮಾಡುತ್ತಿದ್ದರೂ, ಕೋಟ್ಯಾಂತರ ರೈತ ಕುಟುಂಬಗಳಿಗಿನ್ನು ಒಂದೆಕೆರೆ ಭೂಮಿ ಲಭಿಸಿಲ್ಲ. ಭೂಮಿಯನ್ನು ಮುಟ್ಟದ ಹಲವರು, ದೊಡ್ಡ ಪ್ರಮಾಣದ ಭೂಮಿಗಳನ್ನು ತಮ್ಮ ಹಿಡಿತದಲ್ಲಿ ಇಟ್ಟುಕೊಂಡಿದ್ದಾರೆ. ಸಾಲದೆಂಬಂತೆ ಸರ್ಕಾರವೀಗ ದೇಶದ ಹಿತಾಸಕ್ತಿಯ ಹೆಸರಲ್ಲಿ ನಮ್ಮ ಭೂಮಿಗಳನ್ನು ವಶಪಡಿಸಿಕೊಂಡು ಕಂಪನಿಗಳಿಗೆ ಒಪ್ಪಿಸುತ್ತಿದೆ. ಭೂಹೀನ ರೈತಾಪಿಗಾಗುತ್ತಿರುವ ಈ ಅನ್ಯಾಯ ಅಂತ್ಯಗೊಳ್ಳಬೇಕೆಂದು ನಾವು ಆಗ್ರಹಿಸುತ್ತಿದ್ದೇವೆ.

## ಜನತೆಯ ಹಕ್ಕೊತ್ತಾಯಗಳು

- **ಎಲ್ಲಾ ಬೆಳೆಗಳಿಗೆ ವೈಜ್ಞಾನಿಕ ಬೆಲೆ ನಿಗದಿ ಮಾಡಬೇಕು, ಸೂಕ್ತ ಮಾರುಕಟ್ಟೆ ವ್ಯವಸ್ಥೆಯನ್ನು ಮಾಡಬೇಕು.**
- **ಈ ಸಾಲಿನಲ್ಲಿ ಕಬ್ಬಿಗೆ 1500ರೂ, ಭತ್ತಕ್ಕೆ 1100ರೂ ನಿಗದಿ ಮಾಡಬೇಕು.**
- **ಸರ್ಕಾರ ಒಂದು ಸಮಗ್ರ ಸಾಲ ನೀತಿಯನ್ನು ಜಾರಿಗೆ ತರಬೇಕು. ರೈತರ ಒಟ್ಟಾರೆ ಸಾಲಗಳ ಶೇ.90ರಷ್ಟಾದರೂ ಸಾಂಸ್ಥಿಕ ಮೂಲಗಳಿಂದ ಒದಗಿಸಬೇಕು.**
- **ಜಾಗತೀಕರಣ ಮತ್ತು ಡಬ್ಲ್ಯುಟಿಒ ನೀತಿಗಳಿಗೆ ಅಧೀನವಾಗಿ ಸರಕಾರ ತಂದಿರುವ ರೈತ ವಿರೋಧಿ ಜಲಬಳಕೆ ನೀತಿ, ವಿದ್ಯುತ್ ಸರಬರಾಜು ನೀತಿ ಹಾಗೂ ಬೆಳೆ ನೀತಿಗಳನ್ನು ಹಿಂತೆಗೆದುಕೊಳ್ಳಬೇಕು.**
- **ರೈತಸಮುದಾಯ ಸಂಪೂರ್ಣ ಚೇತರಿಸಿಕೊಳ್ಳುವವರೆಗೆ ಉಚಿತ ವಿದ್ಯುತ್ ನೀಡಬೇಕು. ನಗರ ಪ್ರದೇಶಕ್ಕೆ ನೀಡುವಷ್ಟೇ ಅವಧಿಯ ಹಾಗೂ ವೋಲ್ಟೇಜ್‌ಉಳ್ಳ ವಿದ್ಯುತ್ ಗ್ರಾಮೀಣ ಪ್ರದೇಶಕ್ಕೂ ಖಾತರಿ ಮಾಡಬೇಕು**

- **ನೀರಾವರಿಯಿಲ್ಲದ ಎಲ್ಲಾ ಪ್ರದೇಶಗಳಲ್ಲಿ ಸಣ್ಣ ನೀರಾವರಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಬೇಕು. ಅಂತರ್ಜಲ ಹೆಚ್ಚಿಸುವ ಕಾರ್ಯವನ್ನು ಅತ್ಯಂತ ತುರ್ತಾಗಿ ಕೈಗೆತ್ತಿಕೊಳ್ಳಬೇಕು.**
- **ಸಹಜ ಕೃಷಿ, ಸಾವಯವ ಕೃಷಿ ಇತ್ಯಾದಿ ಕೃಷಿ ಪದ್ಧತಿಗಳ ಬಗ್ಗೆ ವಿಶೇಷವಾದ ಅಧ್ಯಯನ ನಡೆಸಬೇಕು. ರೈತರು ಸ್ವಾವಲಂಬಿಯಾಗುವ ನಿಟ್ಟಿನಲ್ಲಿ ಉದಾರವಾಗಿ ಸಬ್ಸಿಡಿಯನ್ನು ನೀಡಬೇಕು.**
- **ಗುತ್ತಿಗೆ (ಕರಾರು) ಕೃಷಿ ಮತ್ತು ಕಾರ್ಪೊರೇಟ್ ಕೃಷಿ ನಿಷೇಧಿಸಬೇಕು.**
- **ಹಾಲಿ ಜಾರಿಯಾಗುತ್ತಿರುವ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಲ್ಲಿ, ಈಗಿರುವ ಕನಿಷ್ಠ ವೇತನವನ್ನು ಹೆಚ್ಚಿಸಬೇಕು.**
- **ಭೂ ಮಿತಿ ಕಾಯ್ದೆಯನ್ನು ಬಡ ರೈತಾಪಿಯ ಪರವಾಗಿ ಪರಿಷ್ಕರಿಸಬೇಕು. ಭೂರಹಿತರಿಗೆ ಮತ್ತು ಕಡಿಮೆ ಭೂಮಿ ಹೊಂದಿರುವವರಿಗೆ ಒಂದು ಹೆಕ್ಟೇರ್‌ಗೆ ಕಡಿಮೆ ಇಲ್ಲದಂತೆ ಭೂಮಿ ಹಂಚಿಕೆ ಆಗಬೇಕು. ಬಗರ್‌ಹುಕುಂ ಸಾಗುವಳಿದಾರರಿಗೆ ಒಂದು ವರ್ಷದೊಳಗೆ ಜಮೀನಿಗೆ ಖಾಯಂ ಪಟ್ಟಾ ನೀಡಬೇಕು.**

*ಕರ್ನಾಟಕದ ಭೂಗರ್ಭವನ್ನು ಅಗೆದಿರುವ ಗಣಿ ಮಾಲೀಕರ, ಮಧ್ಯದ ದೊರೆಗಳ ಅಕ್ರಮ ಸಂಪತ್ತನ್ನು ಸರ್ಕಾರವು ವಶಪಡಿಸಿಕೊಂಡರೆ, 'ಭೂ ಮಿತಿ ಕಾಯ್ದೆ'ಯಂತೆ ಈ ದೇಶದ ಆಗರ್ಭ ಶ್ರೀಮಂತರ ಮೇಲೆ 'ಸಂಪತ್ತು ಮಿತಿ ಕಾಯ್ದೆ'ಯನ್ನು ಜಾರಿ ಮಾಡಿ ಅವನ್ನು ದೇಶದ ಜನತೆಯ ಸಂಪತ್ತನ್ನಾಗಿ ಪರಿವರ್ತಿಸಿದರೆ, ದೇಶದಿಂದ ಸೂರೆ ಹೋಗುತ್ತಿರುವ ವಿದೇಶೀ ಕಂಪೆನಿಗಳ ಲಾಭವನ್ನು ಇತ್ತ ಕಡೆಗೆ ತಿರುಗಿಸಿದರೆ ಇವೆಲ್ಲವೂ ಸುಲಭ ಸಾಧ್ಯ ಎಂಬುದು ಈ ನಾಡಿಗೆ ಅನ್ನ, ರೊಟ್ಟಿ, ಗಂಜಿ ನೀಡುತ್ತಿರುವ ನಮಗೆ ಖಾತ್ರಿಯಿದೆ.*

## ನಗರಗಳ ಬಡವರು ಮತ್ತು ಸ್ಲಂ ಜನತೆ – ದೀಪದ ಕೆಳಗಿನ ಕತ್ತಲೆ

ನಗರಗಳು ಝಗಝಗಿಸುತ್ತಿವೆ–ಆದರೆ ನಗರಗಳಲ್ಲಿರುವ ಸ್ಲಂ ಜನತೆಯ ಬದುಕು ಅಂಧಕಾರದಲ್ಲಿದೆ. ಈ ರಾಜ್ಯದ ಉದ್ದಗಲಕ್ಕೂ ನಾಲ್ಕೂವರೆ ಸಾವಿರ ಕೊಳಚೆ ಪ್ರದೇಶಗಳಿವೆ. ಇಲ್ಲಿ ಸುಮಾರು 40 ಲಕ್ಷದಷ್ಟು ಬಡವರು ವಾಸವಿದ್ದಾರೆ. ರಾಜ್ಯದ ಒಟ್ಟು ಜನಸಂಖ್ಯೆಯ ಶೇ.8ರಷ್ಟು ಜನ ಕೊಳೆಗೇರಿಗಳಲ್ಲಿ ವಾಸವಿರುವುದು ಯಾವ ಪಕ್ಷಕ್ಕೂ ತಿಳಿಯದ ಸಂಗತಿಯೇನಲ್ಲ. ನಗರಗಳ ಜನಸಂಖ್ಯೆಯ ಶೇ.25ರಷ್ಟಿರುವ ಸ್ಲಂಜನ ಕಳೆದ 60 ವರ್ಷಗಳಿಂದ ಕನಿಷ್ಟ ಕುಡಿಯುವ ನೀರು, ಸಮರ್ಪಕ ಶೌಚಾಲಯ, ನೆತ್ತಿಯ ಮೇಲೊಂದು ಸೂರು ಇಲ್ಲದಂತೆ ಬದುಕುತ್ತಿದ್ದಾರೆ. ಕಳೆದ 60 ವರ್ಷಗಳಿಂದ ರಾಜ್ಯವನ್ನಾಳಿದ ಪಕ್ಷಗಳು ಸ್ಲಂ ಜನರಿಗೆ ನೀಡಿದ್ದಕ್ಕಿಂತ ಕಿತ್ತುಕೊಂಡಿದ್ದೇ ಹೆಚ್ಚು. ಈಗ 20 ವರ್ಷಗಳಿಂದ ಜಾಗತೀಕರಣವೆಂದು ಕರೆಯಲಾಗುವ ದೇಶದ ಜನಸಾಮಾನ್ಯರ ವಿರುದ್ಧವಿರುವ ನೀತಿ

ಶುರುವಾದಂದಿನಿಂದ ಸರ್ಕಾರ ತನ್ನ ಜವಾಬ್ದಾರಿಗಳಿಂದ ಹಿಂದೆ ಸರಿಯುತ್ತಿದೆ. ಇನ್ನೊಂದೆಡೆ ಹಣ ನೀಡಿ ಬಳಸುವ ಶೌಚಾಲಯಗಳನ್ನು ನಿರ್ಮಿಸಿ, ಶೌಚಾಲಯದಲ್ಲಿ ಸ್ಲಂ ಜನರಿಂದ ಹಣ ಕೀಳಲು ಸರ್ಕಾರ ಹೊರಟಿವೆ. ರಾಜ್ಯ ಸರ್ಕಾರ ಸ್ಲಂ ಜನರಿಗಾಗಿನ ಎಲ್ಲಾ ವಸತಿ ಯೋಜನೆಗಳನ್ನು ಹಿಂಪಡೆದುಕೊಂಡು ಬಿಟ್ಟಿದೆ. ಐಎಚ್‌ಎಸ್‌ಡಿಪಿ ಎಂಬ ಹೆಸರಿನ ಕೇಂದ್ರ ಸರ್ಕಾರದ ವಸತಿ ಯೋಜನೆ ಕೇವಲ ಕೆಲವೇ ನಗರಗಳ ಬೆರಳೆಣಿಕೆಯ ಸ್ಲಂಗಳಿಗೆ ಸೀಮಿತವಾಗಿದೆ. ಇದುವರೆಗೆ ವಸತಿಯ ಹೆಸರಿನಲ್ಲಿ ಸರ್ಕಾರ ವಾಂಬೆ ಯೋಜನೆಯಡಿ ನೀಡುತ್ತಿದ್ದ 40 ಸಾವಿರ ರೂಪಾಯಿಯಿಂದ ಯಾವೊಂದು ಮನೆಯ ನಿರ್ಮಾಣವು ಸಾಧ್ಯವಾಗುತ್ತಿಲ್ಲ. ನಗರದ ಬಡವರೇ ಆದ ಫುಟ್‌ಪಾತ್ ವ್ಯಾಪಾರಿಗಳು ನಗರ ಸೌಂದಯದ ನೆಪದಲ್ಲಿ ಎತ್ತಂಗಡಿಯಾಗುತ್ತಿದ್ದಾರೆ.

40ವರ್ಷಕ್ಕೂ ಹೆಚ್ಚು ಕಾಲ ಆಳಿದ ಕಾಂಗ್ರೆಸ್ ಪಕ್ಷದಿಂದ ಸ್ಲಂ ಜನರ ಅಂಗೈಯಂಗಲದ ಸೂರಿಗೆ ಯಾವ ಹಕ್ಕು ಪತ್ರವೂ ದಕ್ಕಿಲ್ಲ. ಚಾಮರಾಜಪೇಟೆಯ ಉಪಚುನಾವಣೆ ಸಂದರ್ಭದಲ್ಲಿ ಸ್ಲಂ ಜನರ ಹೆಸರಿನಲ್ಲಿ ದರಿದ್ರ ನಾರಾಯಣರ ಸಮಾವೇಶ ನಡೆಸಿದ ದೇವೇಗೌಡರು ಮುಂದಿನ ಅಕ್ಟೋಬರ್ 1ರೊಳಗೆ ಹಕ್ಕುಪತ್ರ ಕೊಡಿಸುವ ನಾಟಕವಾಡಿದರು. ನಂತರ ಮೂರು ಅಕ್ಟೋಬರ್‌ಗಳು ಕಳೆದರೂ, ಅವರ ನೇತೃತ್ವದಲ್ಲೇ ಬಿಜೆಪಿ-ಜೆಡಿಎಸ್ ಸರ್ಕಾರ ಬಂದರೂ, ಹಕ್ಕುಪತ್ರ ನೀಡಲಾಗಲಿಲ್ಲ. ಬಿಜೆಪಿಯ ಯಡಿಯೂರಪ್ಪ ಹಣಕಾಸು ಮಂತ್ರಿಯಾಗಿದ್ದಾಗ ತಮ್ಮ ಬಜೆಟ್‌ನಲ್ಲಿ ಏಳೆಂಟು ಮಠ ಮಾನ್ಯಗಳಿಗೆ ಕೊಟ್ಟ ಹಣಕ್ಕಿಂತ ಕಡಿಮೆ ಹಣವನ್ನು 40 ಲಕ್ಷದಷ್ಟಿರುವ ಸ್ಲಂ ಜನರಿಗೆ ಕೊಟ್ಟರು. ಬಿಜೆಪಿ ಪರಿವಾರದ ಹತ್ತು ಹಲವು ಸಂಘಟನೆಗಳು ಸ್ಲಂಗಳಲ್ಲಿ ವಿದ್ಯಾರ್ಥಿಗಳಿಗೆ ಪಾಠ ಹೇಳುವ ನೆಪ ಹೇಳಿ ಕೋಮುವಾದಿ ವಿಷವನ್ನು ತುಂಬುವ ಹುನ್ನಾರವನ್ನು ನಾವು ಈಗಾಗಲೇ ನಮ್ಮ ಸಂಘಟನೆಗಳ ಮುಖಾಂತರ ತಡೆದಿದ್ದೇವೆ. ಅವರು ರೂಪಿಸುವ ಕೋಮು ಗಲಭೆಯ ಹುನ್ನಾರಗಳಲ್ಲಿ ನಮ್ಮನ್ನು ಕಾಲಾಳುಗಳನ್ನಾಗಿ ಬಳಸಿಕೊಂಡು ನಮ್ಮನ್ನು ಬಲಿ ಹಾಕುವುದನ್ನೂ ಅರಿತಿದ್ದೇವೆ. ಅವರು ಹೇಗೂ ನಮ್ಮ ಓಟು ಪಡೆಯಲು ಅನರ್ಹರು.

## ಜನತೆಯ ಹಕ್ಕೊತ್ತಾಯಗಳು

- **ಸ್ಲಂ ಜನರಿಗಾಗಿ ನೂತನ ವಸತಿ ಯೋಜನೆ ರೂಪಿಸಬೇಕು. ಮನೆಗಳ ನಿರ್ಮಾಣ ವೆಚ್ಚ ಕನಿಷ್ಠ 1 ಲಕ್ಷ ರೂಪಾಯಿ ನಿಗದಿಯಾಗಬೇಕು. ಕುಡಿಯುವ ನೀರಿನ ಪೂರೈಕೆ ಜವಾಬ್ದಾರಿಯನ್ನು ಸ್ಥಳೀಯ ಸಂಸ್ಥೆಗಳಿಗೆ ಕಡ್ಡಾಯಗೊಳಿಸುವುದು.**
- **ಸ್ಲಂ ಕಾಯ್ದೆಗೆ ಅಗತ್ಯ ತಿದ್ದುಪಡಿಗಳೊಂದಿಗೆ ಸ್ಲಂ ಜನರ ಪರವಾಗಿ ಕಾಯ್ದೆಯನ್ನು ರೂಪಿಸಬೇಕು.**
- **ಘೋಷಿತ/ಅಘೋಷಿತ ಕೊಳಚೆ ಪ್ರದೇಶಗಳ ಭೂಮಿಯ ಹಕ್ಕು ಸ್ಲಂ ಜನರಿಗೆ ದೊರಕುವಂತೆ ಸ್ಲಂನಿವಾಸಿಗಳಿಗೆ ಹಕ್ಕುಪತ್ರ/ಖಾತಾಪತ್ರ ನೀಡಬೇಕು. ಸರ್ಕಾರಿ/ ಖಾಸಗಿ ಬಡಾವಣೆಗಳಲ್ಲಿ ಸ್ಲಂ ಜನರಿಗೆ ಕಡ್ಡಾಯವಾಗಿ ಶೇ.10 ರಷ್ಟು ಭೂಮಿ ಮೀಸಲಿರಿಸಬೇಕು.**
- **ಸ್ಥಳೀಯ ಸಂಸ್ಥೆಗಳ ಶೇ.18ರ ನಿಧಿಯನ್ನು ಪ್ರಧಾನವಾಗಿ ಸ್ಲಂಗಳ ಅಭಿವೃದ್ಧಿಗೆ ಬಳಸುವಂತೆ ಕಾನೂನು ಜಾರಿ ಮಾಡಬೇಕು. ಸ್ಲಂ ಜನರನ್ನು ಯಶಸ್ವಿನಿ ಯೋಜನೆಯ ವ್ಯಾಪ್ತಿಯಡಿ ತರಬೇಕು.**

- ವಿವಿಧ ಇಲಾಖೆಗಳಲ್ಲಿನ ಸೌಲಭ್ಯಗಳ ಯೋಜನೆಯಲ್ಲಿ ಸ್ಲಂ ಜನರಿಗೆ ಕೋಟಾ ನಿಗದಿ ಮಾಡಿ, ಏಕಗವಾಕ್ಷಿಯಡಿ ಸ್ಲಂಜನರಿಗೆಂದೇ ಸಚಿವಾಲಯ ರೂಪಿಸಿ ಅದರ ಮೂಲಕ ಜಾರಿಗೊಳಿಸಬೇಕು
- ಸ್ಲಂಗಳ ಘೋಷಣೆಗಾಗಿನ ಕಟ್‌ಆಫ್ ಡೇಟ್ ನಿರ್ಬಂಧವನ್ನು ಸಂಪೂರ್ಣವಾಗಿ ಹಿಂಪಡೆಯಬೇಕು. ಘೋಷಣೆಗೆ ಕಾಲಮಿತಿ ನಿಗದಿಪಡಿಸಿ, ಘೋಷಣೆಯ ಆಗುಹೋಗುಗಳಿಗೆ ಆಯಾ ಜಿಲ್ಲಾಧಿಕಾರಿಗಳನ್ನು ಹೊಣೆ ಮಾಡಬೇಕು.
- ನಗರ ಪ್ರದೇಶಗಳಲ್ಲಿ ಭೂಕಬಳಿಕೆ ಮಾಡಿರುವ ಖೂಳರ (ಅಂತಹವರಲ್ಲಿ ಬಹಳಷ್ಟು ಜನ ಮುಂದಿನ ವಿಧಾನಸಭೆಯಲ್ಲಿರುತ್ತಾರೆ) ಅಕ್ರಮ ಆಸ್ತಿಪಾಸ್ತಿಯನ್ನು ಜಪ್ತಿ ಮಾಡಿದರೆ ನಮ್ಮ ಸ್ಲಂಗಳ ಅಭಿವೃದ್ಧಿಗೆ ಬೇಕಾದಷ್ಟು ಹಣ ದೊರೆಯುತ್ತದೆ. ಸರ್ಕಾರವು ಯಾರ ಪರ ಎಂಬುದನ್ನು ನಿರ್ಧರಿಸಬೇಕಷ್ಟೆ.

## ಕಾರ್ಮಿಕರು-ಅಭದ್ರತೆಯಲ್ಲಿರುವ ಕಷ್ಟಜೀವಿಗಳು

ಕಾರ್ಮಿಕರ ಸಂಖ್ಯೆ ಹೆಚ್ಚಾಗುತ್ತಿದೆ. ಆದರೆ ಬದುಕಿನ ಭದ್ರತೆ ಕುಸಿಯುತ್ತಿದೆ. ಇಂದು ಗ್ರಾಮೀಣ ಭಾಗದಲ್ಲಿ ನಿಶ್ಚಿತವಾದ ವರ್ಷಪೂರ್ತಿ ದೊರೆಯುವ ಆದಾಯವಿಲ್ಲದೆ ಮತ್ತು ನಮಗಿರುವ ಸಣ್ಣ ಪ್ರಮಾಣದ ಭೂಮಿಯಲ್ಲಿ ಸಾಕಷ್ಟು ಉತ್ಪತ್ತಿ ಕಾಣದೆ ದೊಡ್ಡ ಸಂಖ್ಯೆಯಲ್ಲಿ ರೈತ ಮಕ್ಕಳು ನಗರಗಳನ್ನು ಸೇರುತ್ತಿದ್ದೇವೆ. ಹಾಗೆ ಸೇರುತ್ತಿರುವ ಮತ್ತು ಈಗಾಗಲೇ ಲಕ್ಷಾಂತರ ಸಂಖ್ಯೆಯಲ್ಲಿರುವ ನಮ್ಮೆಲ್ಲರಿಗೆ ಎಲ್ಲೂ ಖಾಯಂ ಕೆಲಸ ದೊರೆಯುತ್ತಿಲ್ಲ. ಸರ್ಕಾರವು ತನ್ನ ವಿವಿಧ ಇಲಾಖೆಗಳ ಹಲವು ರೀತಿಯ ಉದ್ಯೋಗಗಳನ್ನು ಖಾಸಗಿಯವರಿಗೆ ಗುತ್ತಿಗೆ ಆಧಾರದ ಮೇಲೆ ಕೊಟ್ಟಿದೆ. ಕೆ ಜಿ ಎಫ್, ದಾವಣಗೆರೆ, ಹರಿಹರ, ಭದ್ರಾವತಿ. ಇನ್ನು ಹಲವಾರು ಕಡೆ ಕಾರ್ಖಾನೆಗಳನ್ನು ಮುಚ್ಚಿ ಸರಿಯಾದ ಪರಿಹಾರವನ್ನು ಸಹ ನೀಡದೆ ಸಹಸ್ರಾರು ಕಾರ್ಮಿಕರನ್ನು ಬೀದಿಗೆ ತಳ್ಳಲಾಗಿದೆ. ಸರ್ಕಾರಿ ಕಾರ್ಖಾನೆಗಳನ್ನು ಖಾಸಗಿಯವರಿಗೆ ಮಾರಿರುವುದರಿಂದ ಅಲ್ಲಿ ಖಾಯಂ ಕೆಲಸ ಇರಲಿ, ಅಲ್ಲಿರುವವರು ಕೆಲಸ ಕಳೆದುಕೊಳ್ಳದಿದ್ದರೆ ಸಾಕು ಎಂಬಂತಾಗಿದೆ.

ಜಾಗತೀಕರಣದ ನೀತಿಗೆ ಸಿಲುಕಿ ನೇಕಾರೋದ್ಯಮ ಬಿಡಿಸಲಾಗದ ಸಿಕ್ಕುಗಳಲ್ಲಿ ಸಿಲುಕಿದೆ. ಇನ್ನು ಹಮಾಲಿಗಳಾಗಿ, ಮನೆ ಕೆಲಸದವರಾಗಿ, ಪೇಂಟರ್‌ಗಳಾಗಿ. ಬಡಗಿಗಳಾಗಿ. ಕಮ್ಮಾರರಾಗಿ, ಚಮ್ಮಾರರಾಗಿ, ಮೆಕಾನಿಕ್‌ಗಳಾಗಿ, ಪ್ರಿಂಟರ್‌ಗಳಾಗಿ, ಡ್ರೈವರ್‌ಗಳಾಗಿ. ಕಂಡಕ್ಟರ್‌ಗಳಾಗಿ, ಗುತ್ತಿಗೆ ಕಾರ್ಮಿಕರಾಗಿ............ ಪಟ್ಟಿ ಮಾಡಲು ಸಾಧ್ಯವಿಲ್ಲದಷ್ಟು ರೀತಿಯಲ್ಲಿ ದುಡಿಯುತ್ತಿರುವ ಅಸಂಖ್ಯಾತ ಕಾರ್ಮಿಕರಿಗೆ ಸರಿಯಾದ ಸಂಘವೂ ಇಲ್ಲದೆ. ರಕ್ಷಿಸುವ ಕಾನೂನುಗಳೆ ಇಲ್ಲದೆ, ಬದುಕು ಅನಿಶ್ಚಿತತೆಯ ಗಾಳಿಪಟವಾಗಿದೆ. ಈ ರೀತಿ ಕೆಲಸದ ಭದ್ರತೆ ಇಲ್ಲದಿರುವುದು ನಮ್ಮ ಎಲ್ಲಾ ಕಾರ್ಮಿಕರ ಪ್ರಥಮ ಸಮಸ್ಯೆಯಾಗಿದೆ. ಈ ಹಿಂದೆ ಇದ್ದ ಅಲ್ಪ ಸ್ವಲ್ಪ ಕಾರ್ಮಿಕಪರ ಕಾನೂನುಗಳನ್ನು ಮಾಲೀಕರ ಪರ ಮಾಡುತ್ತಿದ್ದಾರೆ. ನಮ್ಮ ಅಭದ್ರತೆಯನ್ನು ಬಳಸಿಕೊಂಡು ನೀಡಬೇಕಾದ ಕನಿಷ್ಠ ಸೌಲಭ್ಯಗಳನ್ನೂ ನಿರಾಕರಿಸುತ್ತಿದ್ದಾರೆ. ಕೆಲಸದ ಅವಧಿ. ಆರೋಗ್ಯದ ಸೌಲಭ್ಯ. ರಜೆಯ ಸೌಲಭ್ಯ ಇವೆಲ್ಲವನ್ನೂ ಕಿತ್ತುಕೊಳ್ಳಲಾಗುತ್ತಿದೆ. 8 ಗಂಟೆ ಕೆಲಸ ನಿಯಮ ಬಂದು ಶತಮಾನವೇ ಆಗಿದ್ದರೂ

ಹಲವಾರು ಕಡೆ 14 ರಿಂದ 18 ಗಂಟೆ ತನಕ ದುಡಿಯುತ್ತಿದ್ದೇವೆ. ನಮ್ಮ ಪಿಎಫ್‌ಅನ್ನು ಕಿತ್ತುಕೊಳ್ಳಲು ಹೊಸ ಕಾನೂನನ್ನು ತರುವ ಹುನ್ನಾರ ನಡೆಯುತ್ತಿದೆ.

**ಜನತೆಯ ಹಕ್ಕೊತ್ತಾಯಗಳು**

- **ಎಲ್ಲಾ ಗುತ್ತಿಗೆ ಕಾರ್ಮಿಕರನ್ನು ಖಾಯಂಗೊಳಿಸಬೇಕು.**
- **ಕಾರ್ಮಿಕ ಕಾನೂನುಗಳನ್ನು ಕಾರ್ಮಿಕರ ಪರ ಬಲಗೊಳಿಸಬೇಕು.**
- **ಕನಿಷ್ಠ ಕೂಲಿ ದರವನ್ನು ಪರಿಷ್ಕರಿಸಬೇಕು. ಗರಿಷ್ಠ 8 ಗಂಟೆ ಕೆಲಸವನ್ನು ಕಡ್ಡಾಯಗೊಳಿಸಬೇಕು. ಹೆಚ್ಚಿಗೆ ದುಡಿಸಿಕೊಂಡವರನ್ನು ಶಿಕ್ಷಿಸುವ ಕಾನೂನು ಜಾರಿಗೆ ಬರಬೇಕು.**
- **ಸರ್ಕಾರಿ ಉದ್ದಿಮೆಗಳನ್ನು ಖಾಸಗಿಯವರ ತೆಕ್ಕೆಗೆ ಹಾಕದೆ ಸರ್ಕಾರವೇ ನಡೆಸಬೇಕು, ಇಲ್ಲಾ ಅಗತ್ಯ ನೆರವಿನೊಂದಿಗೆ ಕಾರ್ಮಿಕರ ಸಹಕಾರಿಗಳಿಗೆ ವಹಿಸಿಕೊಡಬೇಕು.**
- **ಅಸಂಘಟಿತ ಕಾರ್ಮಿಕರಿಗೆ ಕೆಲಸದ ಭದ್ರತೆ ಒದಗಿಸಬೇಕು. ಕಟ್ಟಣ ಕಾರ್ಮಿಕರ ಕಲ್ಯಾಣನಿಧಿಯಂತೆ ಎಲ್ಲಾ ಅಸಂಘಟಿತ ವಲಯದ ಕಾರ್ಮಿಕರಿಗೆ ಕಲ್ಯಾಣ ನಿಧಿ ಸ್ಥಾಪನೆ ಮಾಡಬೇಕು. ಆರೋಗ್ಯವಿಮೆ ಯೋಜನೆಯನ್ನು ಜಾರಿಗೆ ತರಬೇಕು.**
- **ಪೌರ ಕಾರ್ಮಿಕರೂ ಸೇರಿದಂತೆ ಹಲವು ವಲಯಗಳಲ್ಲಿ ಬಹಳ ಕೆಟ್ಟ ಪರಿಸ್ಥಿತಿಯಲ್ಲಿ ದುಡಿಸಲಾಗುತ್ತಿದೆ. ಇದನ್ನು ತಪ್ಪಿಸಬೇಕು. ಕನಿಷ್ಠ ವೇತನವನ್ನು ಈ ಕೂಡಲೇ ಜಾರಿ ಮಾಡಬೇಕು.**
- **ಎಲ್ಲಾ ದಿನಗೂಲಿ ನೌಕರರ ಖಾಯಮಾತಿ ಮಾಡಬೇಕು.**

*ವಿದೇಶೀ ಮತ್ತು ದೇಶೀ ಬಹುರಾಷ್ಟ್ರೀಯ ಕಂಪೆನಿಗಳ ಸಂಪತ್ತು ಲಕ್ಷ–ಕೋಟಿಗಳಲ್ಲಿ ಏರುತ್ತಿರುವುದು ಮತ್ತು ಈ ನಾಡು ಉಸಿರಾಡುತ್ತಿರುವುದು ವಿವಿಧ ಕ್ಷೇತ್ರಗಳಲ್ಲಿ ಹರಿಸುತ್ತಿರುವ ಬೆವರಿನಿಂದಲೇ ಅಲ್ಲವೇ?*

*ನಾವು ಬೆವರನು ಸುರಿಸಿ ದುಡಿಯುವ ಜನ ನಮ್ಮ ಬೆವರಿನ ಪಾಲನು ಕೇಳುವೆವು*

## ಮಹಿಳೆಯರು– ಮೆಟ್ಟಲ್ಪಡುತ್ತಿರುವ, ಮಾರಲ್ಪಡುತ್ತಿರುವ 'ಮಾತೆಯರು';

"ಮಹಿಳೆಯರು ಪ್ರಪಂಚದ ಜನತೆಯ ಅರ್ಧದಷ್ಟಿದ್ದಾರೆ. ಪ್ರಪಂಚದ ಒಟ್ಟು ದುಡಿಮೆಯಲ್ಲಿ ಮೂರರಲ್ಲಿ ಎರಡು ಭಾಗ ಮಹಿಳೆಯರದ್ದಾಗಿರುತ್ತದೆ. ಆದರೆ ಪ್ರಪಂಚದ ಒಟ್ಟು ಆಸ್ತಿಯಲ್ಲಿ ನೂರರಲ್ಲಿ ಒಂದು ಭಾಗದ ಮೇಲೆ ಮಾತ್ರ ಒಡೆತನ ಹೊಂದಿದ್ದಾರೆ"

ಮಹಿಳೆಯರು ಯಾವಾಗಲೂ ಎರಡು ಪಟ್ಟು ಹೊರೆ ಹೊತ್ತಿದ್ದಾರೆ. ದೇಶದ ಮತ್ತು ಕುಟುಂಬಗಳ ಆರ್ಥಿಕ ವ್ಯವಸ್ಥೆಯ ಬೆನ್ನೆಲುಬಾಗಿದ್ದಾರೆ. ಎಂತಹುದೇ ಸಂದರ್ಭದಲ್ಲೂ ಅತ್ಯಂತ ನಿಷ್ಠೆಯಿಂದ ಕುಟುಂಬದ ಹೊರೆ ಹೊತ್ತಿದ್ದಾರೆ. ಆದರೆ ಅವರ ದುಪ್ಪಟ್ಟು ಶ್ರಮಕ್ಕೆ

ಸಿಗುತ್ತಿರುವ ಪ್ರತಿಫಲ, ಸಿಗಬೇಕಿದ್ದುದರ ಕಾಲುಭಾಗಕ್ಕಿಂತ ಕಡಿಮೆ. ಅವರಿಗೆ ಸಲ್ಲಬೇಕಿದ್ದ ಗೌರವವಂತೂ ಎಂದಿಗೂ ದೊರೆತಿಲ್ಲ. ಬದಲಿಗೆ ಅವರು ನಿರಂತರವಾದ ಶೋಷಣೆ ಮತ್ತು ದೌರ್ಜನ್ಯಗಳಿಗೆ ಗುರಿಯಾಗುತ್ತಾ ಬಂದಿದ್ದಾರೆ. ಅದರಲ್ಲೂ ದಲಿತ ಮತ್ತು ಅಲ್ಪಸಂಖ್ಯಾತ ಮಹಿಳೆಯರು ಜಾತಿ ಮತ್ತು ಧಾರ್ಮಿಕ ವೈಷಮ್ಯಗಳಿಗೂ ಗುರಿಯಾಗಿದ್ದಾರೆ.

ಸಾಮಾಜಿಕ ಅಸಮಾನತೆ ಮತ್ತು ಹಿಂಸೆಯೊಂದಿಗೆ ಕುಟುಂಬದೊಳಗಿನ ಹಿಂಸೆಯೂ ಹೆಚ್ಚುತ್ತಾ ಬಂದಿದೆ. ಪ್ರತಿ 50 ನಿಮಿಷಕ್ಕೆ ಒಬ್ಬ ಮಹಿಳೆ ವರದಕ್ಷಿಣೆಗಾಗಿ ಸಾವಿಗೀಡಾಗುತ್ತಾಳೆ. ಇವುಗಳ ವಿರುದ್ಧ ಹತ್ತಾರು ದಶಕಗಳಿಂದ ಮಹಿಳಾ ಸಂಘಟನೆಗಳು ಸತತವಾಗಿ ಹೋರಾಡಿ ಕೆಲವು ಕಾನೂನುಗಳನ್ನು ತರಲು ಯಶಸ್ವಿಯಾಗಿವೆ. ಆದರೆ ಮೌಲ್ಯಗಳಲ್ಲಿ ಆಳವಾದ ಬದಲಾವಣೆ ಬರುವವರೆಗೂ ಕಾನೂನುಗಳ ಪ್ರಯೋಜನ ಸೀಮಿತವಾಗಿಯೇ ಇರುತ್ತದೆ. ಕಳೆದ ಒಂದು ದಶಕದಲ್ಲಿ ಅಗಾಧವಾಗಿ ಬೆಳೆದ ಸ್ತ್ರೀಶಕ್ತಿ ಗುಂಪುಗಳಿಂದ ಮಹಿಳೆಯರಿಗೆ ವಿಶೇಷವಾಗಿ ಹಳ್ಳಿಗಳಲ್ಲಿ ಸಣ್ಣ ಪ್ರಮಾಣದ ಆರ್ಥಿಕ ಚೈತನ್ಯವನ್ನು, ಮಾತಾಡುವ ಶಕ್ತಿಯನ್ನು ನೀಡಿವೆ. ದುರಂತವೆಂದರೆ ಮಹಿಳೆಯರಿಗಾಗಿ ಏನನ್ನೂ ಮಾಡದ ಇದೇ ರಾಜಕಾರಣಿಗಳ ಈ ಮಹಿಳೆಯರ ಗುಂಪುಗಳನ್ನು ತಮ್ಮ ಭ್ರಷ್ಟ ರಾಜಕಾರಣಕ್ಕೆ ಎಳೆಯುತ್ತಿದ್ದಾರೆ.

ಭಾರತದಲ್ಲಿ ಮಹಿಳಾ ಮೀಸಲಾತಿ ಇನ್ನು ಒಂದು ವಿವಾದಾತ್ಮಕವಾದ ವಿಚಾರವಾಗಿಯೇ ಉಳಿದಿದೆ. ಎಡಪಕ್ಷಗಳು ಬಿಟ್ಟರೆ ಮಿಕ್ಕೆಲ್ಲಾ ದೊಡ್ಡ ಪಕ್ಷಗಳು ಇದಕ್ಕೆ ಒಂದಲ್ಲಾ ಒಂದು ರೀತಿಯ ಅಪಸ್ವರವನ್ನೇ ಎತ್ತುತ್ತಾ ಬಂದಿವೆ. ಜನಸಂಖ್ಯೆಯಾಧಾರಿತವಾಗಿ ಶೇಕಡಾ 50 ಪಾಲನ್ನು ನೀಡುವುದು ಹೋಗಲಿ 33ರ ಪರಿಸ್ಥಿತಿಯೇ ಹೀಗೆ. ಇದುವರೆಗೆ ಎಲ್ಲಾ ರಾಜಕೀಯ ಪಕ್ಷಗಳೂ ತಮ್ಮಲ್ಲಿ ಮಹಿಳೆಯರಿಗೆ ನೀಡಿರುವ ಪ್ರಾತಿನಿಧ್ಯ ಶೇ6ನ್ನೂ ದಾಟುವುದಿಲ್ಲ.

ಇನ್ನು ಕೋಮುವಾದಿ ಬಿಜೆಪಿಯ ವಿಚಾರಕ್ಕೆ ಬರುವುದಾದರೆ, ಮಹಿಳಾ ವಿರೋಧಿ ಮನು ಧರ್ಮವನ್ನು ಎತ್ತಿ ಹಿಡಿಯುವ, ಮಹಿಳೆಯನ್ನು ಎರಡನೆ ದರ್ಜೆ ಪ್ರಜೆಯಾಗಿಯೇ ಕಾಣುವ ಸಂಪ್ರದಾಯವಾದಿ ಪಕ್ಷ ಅದು. ಸತಿ ಸಹಗಮನವನ್ನು ಬಹಿರಂಗವಾಗಿ ಸಮರ್ಥಿಸುವ, ಮಹಿಳೆಯನ್ನು ಮಾತೆಯೆಂದು ಕರೆಯುತ್ತಾ ಅಲ್ಪಸಂಖ್ಯಾತ-ದಲಿತ ಮಹಿಳೆಯರ ಮಾನಭಂಗಗೈಯ್ಯುವ ಭಜರಂಗದಳ, ವಿಶ್ವಹಿಂದೂಪರಿಷತ್‌ಗಳಂಥ ಪುಂಡ ಪಟಾಲಂನ ಸಖ್ಯದಲ್ಲಿರುವ ಅದರಿಂದ ಇನ್ನೇನನ್ನು ತಾನೇ ನಿರೀಕ್ಷಿಸಲು ಸಾಧ್ಯ?

## ಜನತೆಯ ಹಕ್ಕೊತ್ತಾಯಗಳು

- **ಸಕಲ ಆಸ್ತಿ ಮತ್ತು ಅಧಿಕಾರದಲ್ಲಿ ಮಹಿಳೆಗೆ ಸಮಾನ ಹಕ್ಕು ಸಿಗಬೇಕು. ಸಮಾನ ಕೆಲಸಕ್ಕೆ ಸಮಾನ ವೇತನ ಕಡ್ಡಾಯವಾಗಿ ಜಾರಿಯಾಗಬೇಕು.**
- **ಮಹಿಳೆಯರ ಮೇಲಿನ ದೌರ್ಜನ್ಯ ತಡೆಗೆ ಸೂಕ್ತ ಕಾನೂನುಗಳನ್ನು ಮಾಡುವುದು ಮಾತ್ರವಲ್ಲದೆ, ಮಹಿಳಾ ಪರವಾಗಿ ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗಗಳನ್ನು ಸಂವೇದನಾಶೀಲಗೊಳಿಸಬೇಕು. ಸಮಾಜದಲ್ಲಿ ಜಾಗೃತಿ ಮೂಡಿಸಲು ಯೋಜನೆ ರೂಪಿಸಿ ಕಾರ್ಯಪ್ರವೃತ್ತಗೊಳ್ಳಬೇಕು.**

- **ಕನಿಷ್ಠ ಶೇ.33ರಷ್ಟು ಮೀಸಲಾತಿ ಕೇವಲ ಶಾಸನ ಸಭೆಗಳಲ್ಲಲ್ಲ, ಎಲ್ಲಾ ಕ್ಷೇತ್ರಗಳಲ್ಲೂ ಕಡ್ಡಾಯವಾಗಿ ಜಾರಿಗೆ ಬರಬೇಕು. ಮಹಿಳಾ ಮೀಸಲಾತಿಯಲ್ಲಿ ದಲಿತರು, ಹಿಂದುಳಿದವರು ಮತ್ತು ಅಲ್ಪಸಂಖ್ಯಾತ ಮಹಿಳೆಯರಿಗೆ ಜನಸಂಖ್ಯಾವಾರು ಒಳಮೀಸಲಾತಿ ಕಲ್ಪಿಸಬೇಕು.**
- **ಅಂಗನವಾಡಿ ಕಾರ್ಯಕರ್ತೆಯರು ಹಲವು ವರ್ಷಗಳಿಂದ ಮುಂದಿಡುತ್ತಿರುವ ಬೇಡಿಕೆಗಳನ್ನು ಈಡೇರಿಸಬೇಕು.**

## ಅಲ್ಪಸಂಖ್ಯಾತರು–ಅತಂತ್ರದಲ್ಲಿರುವ ಈ ನೆಲದ ಮಕ್ಕಳು

ಈ ನೆಲದ ಮಕ್ಕಳಾಗಿಯೂ, ಬಹುಸಂಖ್ಯಾತ ಧರ್ಮಕ್ಕಿಂತ ಭಿನ್ನವಾದ ಧರ್ಮಗಳನ್ನು ಅನುಸರಿಸುತ್ತಿದ್ದಾರೆ ಎಂಬ ಒಂದೇ ಕಾರಣಕ್ಕೆ ಅತಂತ್ರದಲ್ಲಿ ಬದುಕುವ ದುಸ್ಥಿತಿ ಈ 'ಸ್ವತಂತ್ರ–ಜಾತ್ಯಾತೀತ' ದೇಶದಲ್ಲಿದೆ. ಮುಸ್ಲಿಮರು ಮತ್ತು ಕ್ರಿಶ್ಚಿಯನ್ನರು ಈ ದೇಶದ ಸುಮಾರು ಶೇ.14ರಷ್ಟಿದ್ದಾರೆ. ಈ ದೇಶದ ಅಭಿವೃದ್ಧಿಗೆ, ಸಂಪತ್ತಿನ ಸೃಷ್ಟಿಗೆ ತಮ್ಮದೇ ಆದ ಕೊಡುಗೆಯನ್ನು ನೀಡಿರುವ ಈ ಸಮುದಾಯಗಳ ದುಡಿವ ವರ್ಗ ತಾನು ಮಾತ್ರ ಕೆಟ್ಟ ಪರಿಸ್ಥಿತಿಯಲ್ಲಿದೆ. ಸಾಚಾರ್ ವರದಿ ಸ್ಪಷ್ಟವಾಗಿ ಅಂಕಿ–ಅಂಶಗಳ ಮೂಲಕ ಸಾಬೀತು ಪಡಿಸಿರುವ ಹಾಗೆ ಮುಸ್ಲಿಮರು ಆರ್ಥಿಕವಾಗಿ, ಸಾಮಾಜಿಕವಾಗಿ ಅತ್ಯಂತ ಹಿಂದುಳಿದಿದ್ದಾರೆ. ಈ ಎಲ್ಲಾ ಸಮಸ್ಯೆಗಳ ಜೊತೆಗೆ ಆರೆಸ್ಸೆಸ್ ಮತ್ತು ಅದರ ಪರಿವಾರದ ನಿರಂತರವಾದ ಬಹುಮುಖೀ ದಾಳಿ ಅಲ್ಪಸಂಖ್ಯಾತರ ಮೇಲೆ ನಡೆಯುತ್ತಿದೆ. ಅವರ ಆರ್ಥಿಕ–ಸಾಮಾಜಿಕ ಪರಿಸ್ಥಿತಿ ಈ ದೇಶದ ಅತ್ಯಂತ ಶೋಷಿತ ಸಮುದಾಯಗಳಂತೆಯೇ ಇದ್ದರೂ, ಅವರನ್ನು ತುಷ್ಟೀಕರಿಸಲಾಗುತ್ತದೆಂಬ ಹುಸಿ ಆರೋಪವನ್ನು ಕೋಮುವಾದಿ ಶಕ್ತಿಗಳು ಮಾಡುತ್ತಲಿವೆ. ಆಹಾರ ಪದ್ಧತಿಯಂತಹ ವಿಚಾರಗಳಿಂದ ಹಿಡಿದು ಈ ದೇಶಕ್ಕೆ ನಿಷ್ಠರಾಗಿಲ್ಲವೆಂಬವರೆಗೆ ಹತ್ತು ಹಲವು ಪೂರ್ವಾಗ್ರಹಪೀಡಿತ ಸುಳ್ಳು ಆರೋಪಗಳನ್ನು ಮಾಡಲಾಗುತ್ತಿದೆ. ಮತಾಂತರ ಮತ್ತು ಗೋಮಾಂಸದ ವಿಚಾರದ ಬಗ್ಗೆ ಸಂಘಪರಿವಾರವು ಸಂವಿಧಾನವನ್ನೂ ಮೀರಿ, ತಮ್ಮದೇ ಹಿತಾಸಕ್ತಿಗಳನ್ನು ಕಾನೂನೆಂಬಂತೆ ಚಲಾಯಿಸುತ್ತಿದ್ದಾರೆ.

ಇವೆಲ್ಲವೂ ಈ ಸಮುದಾಯಗಳನ್ನು ಮತ್ತಷ್ಟು ಪ್ರತ್ಯೇಕಗೊಳಿಸುತ್ತಿವೆ. ಅದು ಮೂಡಿಸುವ ಹತಾಶೆ ಕೆಲವು ಯುವಕರನ್ನು ಭಯೋತ್ಪಾದಕ ಚಟುವಟಿಕೆಗಳಿಗೆ ಪ್ರೇರೇಪಿಸುತ್ತಿದೆ. ಕೆಲವು ಉಗ್ರಪಂಥೀಯ ಇಸ್ಲಾಮಿಕ್ ಮೂಲಭೂತವಾದಿ ಸಂಘಟನೆಗಳು ಅಂತಹವರನ್ನು ಬಳಸಿಕೊಳ್ಳುತ್ತಿವೆ. ಇದನ್ನು ಇರುವುದಕ್ಕಿಂತ ಸಾವಿರಾರು ಪಟ್ಟು ಹಿಗ್ಗಿಸಿ ಇಡೀ ಸಮುದಾಯವನ್ನೇ ದೂಷಿಸಲಾಗುತ್ತಿದೆ.

ಕಳೆದೊಂದು ವರ್ಷದಲ್ಲಿ ಕ್ರಿಶ್ಚಿಯನ್ ಸಮುದಾಯದ ಮೇಲೂ ಸಹ ಸಂಘಪರಿವಾರವು ಹಲವು ವ್ಯವಸ್ಥಿತ ದಾಳಗಳನ್ನು ನಡೆಸಿದೆ. ಇದಕ್ಕೆ ಕಾರಣರಾದವರನ್ನು ಸೂಕ್ತವಾಗಿ ಶಿಕ್ಷಿಸುವ ಕೆಲಸ ನಡೆದಿಲ್ಲ.

ಇವನ್ನು ಮಾಡುತ್ತಿರುವ ಸಂಘಪರಿವಾರದ ಶಕ್ತಿಗಳನ್ನು ನಿಗ್ರಹಿಸುವುದು ಪ್ರಜಾಪ್ರಭುತ್ವ ಸರ್ಕಾರಗಳ ಅತ್ಯಂತ ಆದ್ಯ ಕರ್ತವ್ಯವಾಗಿದೆ. ಗುಜರಾತ್‌ನಲ್ಲಿ ನಡೆಸಿದ ಅತ್ಯಂತ ಹೀನ ಹತ್ಯಾಕಾಂಡ ಇನ್ನೂ ಜನರ ಮನಸ್ಸಿನಲ್ಲಿ ಹಸಿಯಾಗಿರುವಾಗಲೇ ಮೋದಿ ಮಾದರಿಯ

ರಾಜ್ಯವನ್ನಾಗಿ ಕರ್ನಾಟಕವನ್ನು ಮಾಡುತ್ತೇವೆಂದು ಇಲ್ಲಿನ ಬಿಜೆಪಿ ಪಕ್ಷವು ಸಾರಿ ಹೇಳುತ್ತಿದೆ. ಇದನ್ನು ತಡೆಯಬೇಕಾದ್ದು ಅತ್ಯಗತ್ಯ. ಅದನ್ನು ಈ ನಾಡಿನ ಪ್ರಜ್ಞಾವಂತ ನಾಗರಿಕರು ಮಾಡುತ್ತೇವೆ. ಅಧಿಕಾರದ ಆಸೆಯಿಂದಾಗಿ ಬಿಜೆಪಿಯೊಂದಿಗೆ ಮೈತ್ರಿ ಮಾಡಿಕೊಳ್ಳಬಾರದೆಂದು ಎಲ್ಲಾ ಪಕ್ಷಗಳಿಗೂ ನಾವು ಎಚ್ಚರಿಸುತ್ತಿದ್ದೇವೆ. ಹಾಗೆಯೆ ಓಟು ಪಡೆಯುವುದು ಮಾತ್ರ ಮಾಡಿ ಕೋಮುವಾದದ ವಿರುದ್ಧ ಸೊಲ್ಲೆತ್ತದೆ ಮೌನ ತಾಳುವ ಧೋರಣೆಯನ್ನು ಬಿಟ್ಟು, ಮನುಕುಲ ವಿರೋಧಿ ಶಕ್ತಿಗಳನ್ನು ನಿಗ್ರಹಿಸಲು ಮುಂದೆ ಬರಬೇಕೆಂದು ಒತ್ತಾಯಿಸುತ್ತಿದ್ದೇವೆ.

## ಜನತೆಯ ಹಕ್ಕೊತ್ತಾಯಗಳು

- **ಅಲ್ಪಸಂಖ್ಯಾತರ ಆರ್ಥಿಕ-ಸಾಮಾಜಿಕ-ಸಾಂಸ್ಕೃತಿಕ ಬದುಕನ್ನು ಅಭಿವೃದ್ಧಿಪಡಿಸಲು ಕ್ರಮಕೈಗೊಳ್ಳಬೇಕು. ಸಾಚಾರ್ ವರದಿಯ ಅಂಶಗಳನ್ನು ಗಮನಕ್ಕೆ ತೆಗೆದುಕೊಳ್ಳಬೇಕು. ಮಿಶ್ರಾ ಆಯೋಗದ ಶಿಫಾರಸ್ಸುಗಳನ್ನು ಕೂಡಲೆ ಜಾರಿಗೆ ತರಬೇಕು. ಅಲ್ಪಸಂಖ್ಯಾತರಿಗೆ ಪ್ರತ್ಯೇಕ ಮೀಸಲಾತಿಯನ್ನು ನೀಡಬೇಕು.**
- **ಸೌಹಾರ್ದ ವಿರೋಧಿ ಕೋಮುವಾದಿ ಶಕ್ತಿಗಳನ್ನು ನಿಗ್ರಹಿಸಲು ಕ್ರಮ ಕೈಗೊಳ್ಳಬೇಕು. ಅಲ್ಪಸಂಖ್ಯಾತರಿಗೆ ಭದ್ರತೆ ನೀಡುವ ಜವಾಬ್ದಾರಿಯನ್ನು ಸರ್ಕಾರ ವಹಿಸಿಕೊಳ್ಳಬೇಕು. ಕೋಮು ಗಲಭೆಗಳಲ್ಲಿ ಆಗಿರುವ ಪ್ರಾಣ-ಆಸ್ತಿ ನಷ್ಟಕ್ಕೆ ನ್ಯಾಯ ದೊರಕಿಸಿಕೊಡಬೇಕು, ತಕ್ಕ ಪರಿಹಾರವನ್ನು ನೀಡಬೇಕು.**
- **ಅಲ್ಪಸಂಖ್ಯಾತರ ಭಾಷೆ ಮತ್ತು ಸಂಸ್ಕೃತಿಯ ಬೆಳವಣಿಗೆಗೆ ಸೂಕ್ತ ಪ್ರೋತ್ಸಾಹ ನೀಡಬೇಕು.**

## ಕಾರ್ಪೊರೇಟ್ ಸುನಾಮಿಯ ಆತಂಕದಲ್ಲಿ ಸಣ್ಣ, ಮಧ್ಯಮ ವ್ಯಾಪಾರಸ್ಥರು

ಪಟ್ಟಣ ಮತ್ತು ನಗರಗಳಲ್ಲಿನ ಸಣ್ಣ ಮಧ್ಯಮ ವ್ಯಾಪಾರಸ್ಥರು ತಮ್ಮ ವ್ಯಾಪಾರ ಮತ್ತು ಬದುಕನ್ನು ಕಳೆದುಕೊಳ್ಳುವ ಆತಂಕದಲ್ಲಿದ್ದಾರೆ. ಅದರಲ್ಲೂ ಎಲ್ಲೆಡೆ ಬೀದಿಬದಿ ವ್ಯಾಪಾರಿಗಳನ್ನು ಎತ್ತಂಗಡಿ ಮಾಡಲಾಗುತ್ತಿದೆ. ಇದು ನಿಲ್ಲಬೇಕು. ಜನರ ಬದುಕಿಗಿಂತ ನಗರಗಳ ಸೌಂದರ್ಯ ದೊಡ್ಡದಲ್ಲ. ರಿಲೆಯನ್ಸ್, ಬಿರ್ಲಾ, ಮೆಟ್ರೋ, ಸುಭಿಕ್ಷಾ ಮುಂತಾದ ದೊಡ್ಡ ತಿಮಿಂಗಿಲಗಳು ಚಿಲ್ಲರೆ ಮಾರುಕಟ್ಟೆಯನ್ನು ದೊಡ್ಡ ಪ್ರಮಾಣದಲ್ಲಿ ಪ್ರವೇಶಿಸಿವೆ. ಅಮೇರಿಕಾದ ವಾಲ್‌ಮಾರ್ಟ್‌ನಂತಹ ಬೃಹತ್ ಕಂಪನಿಗಳು ಈಗಾಗಲೇ ಬಿರ್ಲಾ ಜೊತೆ ಒಪ್ಪಂದ ಮಾಡಿಕೊಂಡು ಅಂತಿಮ ಅನುಮತಿಗಾಗಿ ಕಾಯುತ್ತಿವೆ. ಅಧ್ಯಯನದ ಒಂದರ ಪ್ರಕಾರ ಈ ಕ್ಷೇತ್ರದಲ್ಲಿ ದೊಡ್ಡ ತಿಮಿಂಗಿಲಗಳ ಪ್ರವೇಶ ಭಾರತದ ಆರ್ಥಿಕತೆಯ ಮೇಲೆ ಗಂಭೀರ ದುಷ್ಪರಿಣಾಮಗಳನ್ನು ಬೀರಲಿದೆ. ಸಣ್ಣ ಮತ್ತು ಮಧ್ಯಮ ವ್ಯಾಪಾರಸ್ಥರನ್ನು ದಿವಾಳಿ ಏಳಿಸುತ್ತವೆ.

ಮಾರುಕಟ್ಟೆಯಲ್ಲಿ ಏಕಸ್ವಾಮ್ಯವನ್ನು ಸಾಧಿಸಿ ನಂತರ ಗ್ರಾಹಕರ ಜೇಬಿಗೂ ಇವರು ಕೈ ಇಡಲಿದ್ದಾರೆ. ತಾವೇ ಗುತ್ತಿಗೆ ಕೃಷಿಯ ಮೂಲಕ ಸಾವಿರಾರು ಎಕರೆ ಪ್ರದೇಶದಲ್ಲಿ ಕಡಿಮೆ ವೆಚ್ಚದಲ್ಲಿ ಬೆಳೆಯುವುದರಿಂದ ರೈತರ ಬದುಕನ್ನು ಮತ್ತಷ್ಟು ಅಸ್ಥಿರಗೊಳಿಸಲಿದ್ದಾರೆ.

ಇದನ್ನು ತಡೆಯಬೇಕಾದ ಸರ್ಕಾರಗಳು ಈಗ ಎಪಿಎಂಸಿ ಕಾಯ್ದೆಗೂ ತಿದ್ದುಪಡಿ ತಂದು ಬೃಹತ್ ವ್ಯಾಪಾರಿಗಳಿಗೆ ಅನುಕೂಲ ಮಾಡಿಕೊಡಲು ಹೊರಟಿದ್ದಾರೆ. ಇದನ್ನು ಯಾವ ಪಕ್ಷ ತಡೆಯುತ್ತದೆ? ವ್ಯಾಪಾರಿಗಳ ಪಕ್ಷ ಎಂದು ಹೆಸರಾಗಿರುವ ಬಿಜೆಪಿಯು ಅದನ್ನು ಸುಳ್ಳು ಮಾಡಿದೆ. ಅದು ಭಾರೀ ಬೃಹತ್ ವ್ಯಾಪಾರಿಗಳ ಪಕ್ಷ ಮಾತ್ರವಾಗಿದೆಯಾದ್ದರಿಂದ ಈ ಸಣ್ಣ ಪುಟ್ಟ ವ್ಯಾಪಾರಸ್ಥರ ಬದುಕನ್ನೇನೂ ಉಳಿಸುವುದಿಲ್ಲ.

- ಚಿಲ್ಲರೆ ವ್ಯಾಪಾರದಲ್ಲಿ ವಿದೇಶಿ ಮತ್ತು ದೇಶಿ ಕಾರ್ಪೊರೇಟ್ ಉದ್ದಿಮೆಗಳ ಪ್ರವೇಶವನ್ನು ನಿಷೇಧಿಸಬೇಕು.
- ನಗರ ಸುಂದರೀಕರಣದ ಹೆಸರಲ್ಲಿ ಬೀದಿ ವ್ಯಾಪಾರಿಗಳಿಗೆ ಕಿರುಕುಳ ನೀಡುವುದು ನಿಲ್ಲಬೇಕು.
- ಸಣ್ಣ ಮತ್ತು ಮಧ್ಯಮ ವ್ಯಾಪಾರಿಗಳಿಗೆ ಕಡಿಮೆ ದರದಲ್ಲಿ, ಸುಲಭ ಕಂತುಗಳ ಸಾಲಗಳನ್ನು ಒದಗಿಸಬೇಕು.

## ಕಾಕ ದೃಷ್ಟಿಗೆ ಸಿಲುಕಿರುವ ಆದಿವಾಸಿಗಳು ಮತ್ತು ಅರಣ್ಯ ಸಂಪನ್ಮೂಲ

ಆದಿವಾಸಿಗಳು ಸಮಾಜದ ಬೆಳವಣಿಗೆಯಲ್ಲಿ ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ಅವಕಾಶ ವಂಚಿತವಾದ ಜನ ಸಮುದಾಯವಾಗಿದ್ದಾರೆ. ಕಾಡು ಮೇಡನ್ನು ನಂಬಿ ಬದುಕುತ್ತಾ ಬಂದ ನಮ್ಮ ಬಗ್ಗೆ ಯಾವ ಸರ್ಕಾರಗಳೂ ತಲೆಕೆಡಿಸಿಕೊಂಡಿದ್ದಿಲ್ಲ. ಕನಿಷ್ಠ ರಸ್ತೆ, ವಿದ್ಯುತ್, ಶಾಲೆ, ಆಸ್ಪತ್ರೆ, ಪಡಿತರ ಯಾವುದರ ಬಗ್ಗೆಯೂ ಗಮನ ನೀಡಿದ್ದಿಲ್ಲ. ಆದರೆ ಪಟ್ಟಭದ್ರ ಹಿತಾಸಕ್ತಿಗಳ ಕಣ್ಣು ನಾವು ವಾಸಿಸುವ ಕಾಡು-ನೆಲ-ಜಲದ ಮೇಲೆ ಬಿದ್ದಾಗ, ಒಂದಲ್ಲಾ ಒಂದು ಯೋಜನೆಯಡಿ ನಮ್ಮನ್ನು ಎತ್ತಂಗಡಿ ಮಾಡಿಸಲು ಮಾತ್ರ ಸರ್ಕಾರಗಳು ಉತ್ಸುಕತೆಯಿಂದ ಕೆಲಸ ಮಾಡಿವೆ. ಅದರ ವಿರುದ್ಧ ಹೋರಾಟ ಮಾಡಿದ ನಮ್ಮ ಮೇಲೆ ಇಲ್ಲಸಲ್ಲದ ಕೇಸುಗಳನ್ನು ಹಾಕಿದೆ. ನಕ್ಸಲೀಯರ ಬೆಂಬಲಿಗರೆಂದು ಆರೋಪಿಸಿ ಕೆಲವರನ್ನು ಸುಳ್ಳು ಎನ್‌ಕೌಂಟರ್ ಗಳಲ್ಲಿ ಕೊಂದು ಹಾಕಿದೆ. ನಮ್ಮ ಬದುಕು ಈಗಲೂ ಅತಂತ್ರದಲ್ಲಿದೆ. ನಾವು ನಮ್ಮ ಬದುಕುವ ಹಕ್ಕನ್ನು ಮತ್ತು ನಮ್ಮ ಸಂಪನ್ಮೂಲಗಳ ಮೇಲಿನ ಸ್ವಾಮ್ಯದ ಹಕ್ಕನ್ನು ಕೇಳುತ್ತಿದ್ದೇವೆ.

### ಜನತೆಯ ಹಕ್ಕೊತ್ತಾಯಗಳು

- ನಾವು ವಾಸಿಸುವ ಕಾಡಿನ ಮೇಲಿನ ಪರಮಾಧಿಕಾರ ನಮ್ಮದೇ ಆಗಬೇಕು.
- ಆದಿವಾಸಿ ಪ್ರದೇಶಗಳನ್ನು ಸ್ವಯಂ ಆಳ್ವಿಕೆಗೆ ಒಳಪಡಿಸಬೇಕು.
- ನಮ್ಮ ವಾಸಸ್ಥಳಗಳಿಂದ ಯಾವ ಕಾರಣಕ್ಕೂ ಎತ್ತಂಗಡಿ ಮಾಡಬಾರದು.
- ಗಣಿಗಾರಿಕೆ, ನ್ಯಾಷನಲ್ ಪಾರ್ಕ್, ರೆಸಾರ್ಟ್ ಮುಂತಾದ ಹೆಸರಲ್ಲಿ ಯಾವುದೇ ಜನವಿರೋಧಿ ಯೋಜನೆಗಳನ್ನು ನಮ್ಮ ಒಪ್ಪಿಗೆ ಇಲ್ಲದೆ ನಮ್ಮ ಮೇಲೆ ಹೇರಬಾರದು.

ದಲಿತರು ಮತ್ತು ಹಿಂದುಳಿದವರು ಕೊನೆಮೊದಲಿಲ್ಲದೆ ದುಡಿಯುವವರು, ಕೊನೆ ಪಂಕ್ತಿಗಾಗಿ ಕಾಯಬೇಕಾದವರು

ಹುಟ್ಟಿನ ಆಧಾರದ ಮೇಲೆ ಸಾಮಾಜಿಕ ಸ್ಥಾನಮಾನವನ್ನು ನಿರ್ಧರಿಸುವ, ಪ್ರಪಂಚದಲ್ಲೆ ಎಲ್ಲೂ ಇಲ್ಲದ ಜಾತಿ ಪದ್ಧತಿ ಭಾರತದಲ್ಲಿದೆ. ಈ ಶ್ರೇಣೀಕರಣದ ಕೆಳಸ್ತರದಲ್ಲಿರುವ ದಲಿತ ಮತ್ತು ಹಿಂದುಳಿದ ಜಾತಿಗಳು ಈ ಸಮಾಜವನ್ನು ಕಟ್ಟಲು ಅತ್ಯಂತ ಹೆಚ್ಚಿನ ಶ್ರಮ ಹಾಕಿವೆ. ಆದರೆ ಈ ದೇಶದ ಸಂಪತ್ತು, ಅಧಿಕಾರ, ಸ್ಥಾನಮಾನಗಳಿಂದ ವಂಚಿತಗೊಂಡು ಬದುಕಿವೆ. 20ನೇ ಶತಮಾನದಲ್ಲಿ ಈ ಅಸಮಾನತೆ ವಿರುದ್ಧ ತೀವ್ರಗೊಂಡ ಹೋರಾಟದಿಂದಾಗಿ ಪರಿಸ್ಥಿತಿಯಲ್ಲಿ ಒಂದಷ್ಟು ಬದಲಾವಣೆ ಬಂದಿರುವುದು ನಿಜವಾದರೂ ಜಾತಿ ಶೋಷಣೆ ಅಂತ್ಯಗೊಳ್ಳದೆ ಕಾಡುತ್ತಿದೆ.

ಅದರಲ್ಲೂ ಮುಖ್ಯವಾಗಿ ಕಟ್ಟ ಕಡೆಯ ಸ್ಥಾನಕ್ಕೆ ನೂಕಲ್ಪಟ್ಟ ದಲಿತರ ಪರಿಸ್ಥಿತಿ ಇಂದಿಗೂ ಅತ್ಯಂತ ದಾರುಣವಾಗಿದೆ. ದಲಿತರಲ್ಲಿ ಬರುತ್ತಿರುವ ಜಾಗೃತಿಯನ್ನು ಸಹಿಸದ ಮೇಲ್ಜಾತಿವಾದಿ ಶಕ್ತಿಗಳು ದಲಿತ ಕೇರಿಗಳ ಮೇಲೆ ದಾಳಿ ನಡೆಸುವ, ಕೊಲೆಗೈಯ್ಯುವ, ದಲಿತ ಮಹಿಳೆಯರ ಮೇಲೆ ಅತ್ಯಾಚಾರವೆಸಗುವ, ಪೋಲಿಸರನ್ನು–ಅಧಿಕಾರಿಗಳನ್ನು ಬಳಸಿಕೊಂಡು ಕಿರುಕುಳ ನೀಡುವ, ಪೂಜಾ ಸ್ಥಳಗಳಲ್ಲಿ–ಮನೆಗಳಲ್ಲಿ–ಸಾರ್ವಜನಿಕ ಸ್ಥಳಗಳಲ್ಲಿ ಅಸ್ಪೃಶ್ಯತೆಯನ್ನು ಆಚರಿಸುವ ರೂಪದಲ್ಲಿ ಜಾತಿ ದೌರ್ಜನ್ಯಗಳು ನಿರಂತರವಾಗಿ ಮುಂದುವರಿಯುತ್ತಿವೆ. ಜಾತಿ ದೌರ್ಜನ್ಯದ ವಿರುದ್ಧ ಹಲವಾರು ಮೊಕದ್ದಮೆಗಳು ನಡೆಯುತ್ತಿದ್ದರೂ ಅಂತಿಮವಾಗಿ ಕೋರ್ಟುಗಳಲ್ಲಿ ನ್ಯಾಯ ದೊರಕದೆ ಹೋದ ಪ್ರಸಂಗಗಳೇ ಹೆಚ್ಚು. ಇತ್ತೀಚಿನ ಕಂಬಾಲಪಲ್ಲಿ ಉದಾಹರಣೆಯೆ ಇದಕ್ಕೆ ಜೀವಂತ ಸಾಕ್ಷಿ. ಇದೇ ಪ್ರಜಾಪ್ರಭುತ್ವವೆ? ಯಾವ ಪಕ್ಷಗಳೂ ಇದರ ಬಗ್ಗೆ ಉಸಿರೆತ್ತುತ್ತಿಲ್ಲವೇಕೆ?

ಹಿಂದುಳಿದ ಜಾತಿಗಳಲ್ಲಿರುವ ಒಂದಷ್ಟು ಮುಂದುವರಿದ ಜಾತಿಗಳು, ಅದರಲ್ಲೂ ಆ ಜಾತಿಗಳಲ್ಲಿರುವ ಬಲಾಢ್ಯರು ಮೀಸಲಾತಿ ಮತ್ತು ಭೂ ಸುಧಾರಣೆಗಳ ಅನುಕೂಲತೆ ಪಡೆದುಕೊಂಡು ಸ್ಥಾನಮಾನವನ್ನು ಹೆಚ್ಚಿಸಿಕೊಂಡರೆ ಮಿಕ್ಕಂತೆ ಹಿಂದುಳಿದ ಜಾತಿಗಳಲ್ಲಿರುವ ಜನಸಾಮಾನ್ಯರು ಸಮಾಜದ ಏಣಿಯನ್ನು ಹತ್ತಲಾಗದೆ ಹೆಣಗಾಡುತ್ತಿದ್ದಾರೆ. ಉನ್ನತ ಶಿಕ್ಷಣ ಮತ್ತು ಉನ್ನತ ಹುದ್ದೆಗಳು ಇಂದಿಗೂ ಮೇಲ್ಜಾತಿಯವರ ಮೇಲಾಧಿಪತ್ಯದಲ್ಲೇ ಇದೆ. ಖಾಸಗೀಕರಣದ ಇಂದಿನ ಯುಗದಲ್ಲಿ ಸರ್ಕಾರಿ ಮೀಸಲಾತಿಗೆ ಹೆಚ್ಚಿನ ಅರ್ಥವಿಲ್ಲವಾಗಿದೆ. ಬಹುಪಾಲು ಮೇಲ್ಜಾತಿ ಮಾಲಿಕತ್ವ ಮತ್ತು ಆಡಳಿತದಡಿಯೇ ಇರುವ ಖಾಸಗೀ ಕ್ಷೇತ್ರಗಳಲ್ಲಿ ತಕ್ಕ ಪಾಲನ್ನು ಪಡೆಯಲಾಗದೆ ದಲಿತರು ಮತ್ತು ಹಿಂದುಳಿದವರು ಸಣ್ಣಪುಟ್ಟ ಕೆಲಸಗಳಿಗೇ ಸೀಮಿತಗೊಳ್ಳಬೇಕಾಗಿದೆ.

ಕೋಮುವಾದದ ಅಸ್ತ್ರವನ್ನಿಡಿದು ಕುಣಿಯುತ್ತಿರುವ ಸಂಘಪರಿವಾರ ಜಾತಿವಾದಿ ಶಕ್ತಿಗಳಿಗೆ ಕುಮ್ಮಕ್ಕು ನೀಡಿ ದಲಿತರ ಮೇಲಿನ ಹಲ್ಲೆಗಳ ಹೆಚ್ಚಳಕ್ಕೆ ಕಾರಣವಾಗಿದೆ. ದನದ ಮಾಂಸ ಮಾರುತ್ತಿದ್ದಾರೆಂದು ಆರೋಪಿಸಿ ಹಲವಾರು ಕಡೆ ದಲಿತರ ಮೇಲೆ ದಾಳಿ ಮಾಡಿದ್ದಾರೆ. ಇದಲ್ಲದೆ, ದಲಿತ ಮತ್ತು ಹಿಂದುಳಿದ ಜಾತಿಗಳನ್ನು ಎರಡು ರೀತಿಯಲ್ಲಿ ಸಂಘಪರಿವಾರ ವಂಚಿಸುತ್ತಿದೆ. 'ಹಿಂದುಗಳೆಲ್ಲ ಒಂದು' ಎಂದು ಹುಸಿ ಉನ್ಮಾದವನ್ನು ತುಂಬಿ ಕೋಮು ಗಲಭೆಗಳಲ್ಲಿ ಈ ಸಮುದಾಯಗಳನ್ನು ಬಳಸಿಕೊಂಡು, ಜೀವಗಳ ಬಲಿಕೊಡುತ್ತಿದ್ದಾರೆ ಅಥವಾ ಗಲಭೆಯಲ್ಲಿದ್ದ ಕಾರಣಕ್ಕೆ ಕೋರ್ಟು ಕಚೇರಿ ಅಲೆಯುವಂತೆ

ಮಾಡಿದ್ದಾರೆ. ಗುಜರಾತಿನ ಗಲಭೆ ಮಾಡಿಸಿದ್ದು ಮೇಲ್ಜಾತಿ ಬಿಜೆಪಿ ನಾಯಕತ್ವ. ಆದರೆ ಇಂದು ಜೈಲಿನಲ್ಲಿ ಕೊಳೆಯುತ್ತಿರುವವರು, ಜೈಲಿಗೆ ಅಲೆಯುತ್ತಿರುವವರು ಮಾತ್ರ ಸಾಮಾನ್ಯ ಹಿಂದುಳಿದ ಮತ್ತು ಆದಿವಾಸಿ ಯುವಕರೆ. ಜಾತಿವಾದಿ ಸಂಘಪರಿವಾರಕ್ಕೆ ದಲಿತರು ಮತ್ತು ಹಿಂದುಳಿದವರು ರಾಜಕಾರಣದ ದಾಳಗಳಾಗಿದ್ದಾರೆ. ಅಲ್ಲದೆ, ಸಂಘ ಪರಿವಾರ ಅಲ್ಪಸಂಖ್ಯಾತರ ಮೇಲೆ ಕತ್ತಿ ಬೀಸುತ್ತಿದ್ದರೆ ನಮಗೆ ವಿಷಕುಡಿಸುತ್ತಿದೆ. ಹಿಂದುಗಳೆಲ್ಲ ಒಂದು ಎಂಬ ಹೆಸರಲ್ಲಿ ನಮ್ಮ ಈ ಪರಿಸ್ಥಿತಿಗೆ ಕಾರಣವಾಗಿರುವ ಹಿಂದುತ್ವವನ್ನು ಮತ್ತೆ ನಮಗೆ ಕುಡಿಸುತ್ತಿದ್ದಾರೆ. ವರ್ಣಾಶ್ರಮದ ಆಧಾರದ ಮೇಲೆ ನಿಂತಿರುವ ಹಿಂದು ರಾಷ್ಟವನ್ನು ಕಟ್ಟಲು ನಮ್ಮ ಕೈಯಿಂದಲೇ ಇಟ್ಟಿಗೆ ಹೊರಿಸುತ್ತಿದ್ದಾರೆ. ಹಾಗಾಗಿ ಕೋಮುವಾದ ಕೇವಲ ಅಲ್ಪಸಂಖ್ಯಾತ ಸಮುದಾಯಗಳಿಗೆ ಶತ್ರುವಲ್ಲ, ದಲಿತ ಹಿಂದುಳಿದ ಜಾತಿಗಳಿಗೂ ಪರಮ ಶತ್ರು ಎಂಬುದನ್ನು ನಾವು ಅರಿತಿದ್ದೇವೆ.

## ಜನತೆಯ ಹಕ್ಕೊತ್ತಾಯಗಳು

- **ರಾಷ್ಟ್ರೀಯ ಚರ್ಚೆಯ ನಾಟಕವನ್ನು ನಿಲ್ಲಿಸಿ ಖಾಸಗೀ ಕ್ಷೇತ್ರದಲ್ಲಿ ಮೀಸಲಾತಿಯನ್ನು ಕೂಡಲೆ ಜಾರಿಗೆ ತರಬೇಕು.**
- **ದಲಿತರ ಮೇಲಿನ ದೌರ್ಜನ್ಯಗಳಿಗೆ ನ್ಯಾಯ ಸಿಗುವಂತೆ ಅಗತ್ಯವಿರುವ ಕ್ರಮಗಳನ್ನು ಕೈಗೊಳ್ಳಬೇಕು.**
- **ಜಾತಿವಾದಿ ಸಂಘಪರಿವಾರ ಸಮಾಜದಲ್ಲಿ ಬೆಳೆಯದಂತೆ ಕಡಿವಾಣ ಹಾಕಬೇಕು.**
- **ಉನ್ನತ ಶಿಕ್ಷಣ ಮತ್ತು ಹುದ್ದೆಗಳಲ್ಲಿ ಮೀಸಲಾತಿಯನ್ನು ವಂಚಿಸಲು ಅವಕಾಶ ನೀಡದೆ ಜಾರಿಮಾಡಬೇಕು.**

# ಪಟ್ಟಭದ್ರರ ಬಲೆಯಲ್ಲಿ ಮೀನುಗಾರರು ಮತ್ತು ಕರಾವಳಿ

ಕರಾವಳಿ ಅಪಾಯದ ಕಾವಲಿಯಾಗಿದೆ. ಸಮುದ್ರವಿರುವುದರಿಂದ ಅದರ ದುರುಪಯೋಗ ಮಾಡಿಕೊಳ್ಳಬಯಸುವ ಲಾಭದಾಹಿ ಶಕ್ತಿಗಳು ಜನರ ಬದುಕನ್ನು ಅಪಾಯಕ್ಕೆ ದೂಡುತ್ತಲೇ ಇದ್ದಾರೆ. ಕರ್ನಾಟಕದ ಕರಾವಳಿಯ ನೆತ್ತಿಯ ಮೇಲೆ ಕೈಗಾ ಅಣುಸ್ಥಾವರ ವಿನಾಶವನ್ನೆ ಹೊಟ್ಟೆಯಲ್ಲಿಟ್ಟುಕೊಂಡು ಕೂತಿದೆ. ದೇಶ ರಕ್ಷಣೆಯ ಹೆಸರಲ್ಲಿ ಸೀ ಬರ್ಡ್ ನೌಕಾನೆಲೆ ಸ್ಥಾಪಿಸಿ ಸಾವಿರಾರು ಜನರನ್ನು ಒಕ್ಕಲೆಬ್ಬಿಸಿ, ಸರಿಯಾದ ಪರಿಹಾರವನ್ನೂ ನೀಡದೆ ಬೀದಿಪಾಲು ಮಾಡಿದ್ದಾರೆ. ನಾಗಾರ್ಜುನ ಉಷ್ಣ ವಿದ್ಯುತ್ ಸ್ಥಾವರ ವಿಷಕಕ್ಕಲು ಸಿದ್ಧಗೊಳ್ಳುತ್ತಿದೆ. ಸಾಲದೆಂಬಂತೆ ಕರಾವಳಿ ಉದ್ದಕ್ಕೂ ಹಲವಾರು ಎಸ್ಇಜೆಡ್ ಗಳಿಗೆ ಅನುಮತಿ ನೀಡಲಾಗುತ್ತಿದೆ. ಇದಲ್ಲದೆ ರೆಸಾರ್ಟ್ ನಡೆಸಲು ಸಮುದ್ರದ ತಡಿಯನ್ನೆ ಬಿಟ್ಟು ಕೊಡುತ್ತಿರುವ ಸರ್ಕಾರ ಸಿಆರ್‌ಜೆಡ್ ಹೆಸರಲ್ಲಿ ಸಾಮಾನ್ಯ ಜನರು ಮನೆ ದುರಸ್ತಿ ಸಹ ಮಾಡಿಕೊಳ್ಳದಂತೆ ಕಿರುಕುಳ ಕೊಡುತ್ತಿದೆ. ಮೀನುಗಾರರ ಬದುಕಂತೂ ಅತ್ಯಂತ ಅತಂತ್ರದತ್ತ ಸಾಗುತ್ತಿದೆ. ಕಾಂಗ್ರೆಸ್ ಕಾಲದಲ್ಲಿ ಚರ್ಚೆ ಪ್ರಾರಂಭವಾಗಿ ಎನ್‌ಡಿಎ ಕಾಲದಲ್ಲಿ ಆಳ ಸಮುದ್ರದ ಮೀನುಗಾರಿಕೆ ನಡೆಸಲು ದೊಡ್ಡ ದೊಡ್ಡ ಕಂಪನಿಗಳಿಗೆ ಅವಕಾಶ ಕೊಟ್ಟ ನಂತರ ಮೀನಿನ ಸಂತತಿಯೇ ಕಡಿಮೆಯಾಗುತ್ತಿರುವುದಲ್ಲದೆ, ಸಣ್ಣ ಪುಟ್ಟ ಬೋಟುಗಳಿಗೆ ಎಟುಕದಂತೆ ಇದ್ದಬದ್ದ ಮೀನುಗಳನ್ನೆಲ್ಲಾ ಅವು ಬಾಚಿಕೊಂಡು ಹೋಗುತ್ತಿವೆ.

ಕರಾವಳಿಯಲ್ಲಿ ಬೆಳೆದಿರುವ ಸಂಘಪರಿವಾರದ ವಿಷಕಳೆ ಅಲ್ಲಿನ ಜನರ ಅಭಿವೃದ್ಧಿಗೆ ಒಂದು ಮುಖ್ಯ ತಡೆಯಾಗಿದೆ. ಇವರು ನಿಜವಾದ ಸಮಸ್ಯೆಗಳತ್ತ ಗಮನ ನೀಡಿ ಸಂಘಟಿತರಾಗದಂತೆ ಜನರನ್ನು ದಿಕ್ಕು ತಪ್ಪಿಸಿ, ಪರಸ್ಪರ ದ್ವೇಷ ರಾಜಕಾರಣದಲ್ಲೆ ಮುಳುಗಿರುವಂತೆ ಪ್ರೇರೇಪಿಸುತ್ತಿದ್ದಾರೆ. ಉತ್ತರದ ಕರಾವಳಿಯಲ್ಲಿ ಅಣುಸ್ಥಾವರ ಬಾಂಬ್ ರೀತಿ ನೆತ್ತಿಯ ಮೇಲೆ ಕೂತಿದ್ದರೆ, ದಕ್ಷಿಣ ಕರಾವಳಿಯಲ್ಲಿ ಕೋಮುವಾದ ಯಾವಾಗ ಬೇಕಾದರೂ ಸಿಡಿಯುವ ಸ್ಥಿತಿಯಲ್ಲಿ ಜನಸಾಮಾನ್ಯರನ್ನು ವಿಶೇಷವಾಗಿ ಮುಸ್ಲಿಂ ಸಮುದಾಯವನ್ನು ಆತಂಕದಲ್ಲಿಟ್ಟಿದೆ.

## ಜನತೆಯ ಹಕ್ಕೊತ್ತಾಯಗಳು

- **ಕರಾವಳಿ ತೀರದಲ್ಲಿ ಜಾರಿಗೆ ತರುತ್ತಿರುವ ಜನವಿರೋಧಿ ಯೋಜನೆಗಳನ್ನು ಕೈಬಿಡಬೇಕು.**
- **ವಿದೇಶಿ ಮತ್ತು ದೇಶಿ ದೈತ್ಯ ಮೀನು ಕಂಪನಿಗಳಿಗೆ ಮೀನುಗಾರಿಕೆ ಮಾಡಲು ಕೊಟ್ಟಿರುವ ಅನುಮತಿಯನ್ನು ರದ್ದು ಮಾಡಬೇಕು.**
- **ಸಿಆರ್‌ಜೆಡ್ ಕಾಯ್ದೆಯನ್ನು ಬಡಜನರಿಗೆ ಮುಳುವಾಗದಂತೆ ಪರಿಷ್ಕರಿಸಬೇಕು.**
- **ಹರಡುತ್ತಿರುವ ಕೋಮುವಾದಿ ವಿಷಕಳೆಯನ್ನು ನಿರ್ಬಂಧಿಸಿ ಸೌಹಾರ್ದ ಕರಾವಳಿಯನ್ನು ಕಟ್ಟಲು ಕ್ರಮ ಕೈಗೊಳ್ಳಬೇಕು.**

## ಪ್ರಾದೇಶಿಕ ಅಸಮಾನತೆ

ಐತಿಹಾಸಿಕ ಕಾರಣಗಳಿಂದಾಗಿ ಕರ್ನಾಟಕದ ವಿವಿಧ ಭಾಗಗಳ ಬೆಳವಣಿಗೆ ಒಂದೇ ರೀತಿ ಇಲ್ಲ. ಆದರೆ ಕರ್ನಾಟಕ

ಏಕೀಕರಣವಾದ ನಂತರ ಇದನ್ನು ಸರಿಪಡಿಸುವ ಬದಲಿಗೆ, ಅದು ಮತ್ತಷ್ಟು ಹೆಚ್ಚಲು ಎಲ್ಲಾ ಸರ್ಕಾರಗಳು ತಮ್ಮ ಕೊಡುಗೆಯನ್ನು ನೀಡಿವೆ. ಇಂತಹ ಅಸಮಾನ ಬೆಳವಣಿಗೆಯು ರಾಜ್ಯದ ಎಲ್ಲೆಡೆ ಇರುವ ಬಗ್ಗೆ ಮೊದಲಲ್ಲೇ ತಿಳಿಸಲಾಗಿದೆ. ಆದರೆ ಉತ್ತರ ಕರ್ನಾಟಕದ ಅದರಲ್ಲೂ ಹೈದ್ರಾಬಾದ್ ಕರ್ನಾಟಕದ ಹಿಂದುಳಿದಿರುವಿಕೆಯ ವಿಚಾರದಲ್ಲಿ ಈ ತಾರತಮ್ಯ ಎದ್ದು ಕಾಣುತ್ತಿದೆ. ಹಾಗಾಗಿಯೇ ಪ್ರತ್ಯೇಕ ರಾಜ್ಯದ ಬೇಡಿಕೆಯು ಎದ್ದಿದೆ. ಇದಲ್ಲದೇ ಸಂವಿಧಾನದ 371ನೇ ವಿಧಿಯ ಅನ್ವಯ ವಿಶೇಷ ಸ್ಥಾನಮಾನವನ್ನು ಅಲ್ಲಿನ ಹೋರಾಟಗಾರರು ಕೇಳುತ್ತಿದ್ದಾರೆ.

## ಜನತೆಯ ಹಕ್ಕೊತ್ತಾಯಗಳು

- **ನಂಜುಂಡಪ್ಪ ವರದಿಯಲ್ಲಿನ ಶಿಫಾರಸ್ಸುಗಳನ್ನು ಕೂಡಲೇ ಅನುಷ್ಠಾನಗೊಳಿಸಬೇಕು.**
- **ಅಲ್ಲಿನ ಹೋರಾಟಗಾರರು ಮುಂದಿಟ್ಟಿರುವ ಬೇಡಿಕೆಗಳನ್ನು ಗಂಭೀರವಾಗಿ ಪರಿಶೀಲಿಸಿ, ತಾರತಮ್ಯ ನಿವಾರಣೆಗೆ ಎಲ್ಲಾ ಕ್ರಮಗಳನ್ನೂ ಕೈಗೊಳ್ಳಬೇಕು.**

# ಆಹಾರ, ಆರೋಗ್ಯ, ವಸತಿ ಮತ್ತು ಶಿಕ್ಷಣ; ಕನಿಷ್ಠ ಅಗತ್ಯಗಳಿಗೂ ಕುತ್ತು

ಬದುಕನ್ನು ತಳ್ಳಲು ಮೇಲಿನ ನಾಲ್ಕು ಕನಿಷ್ಠ ಅಗತ್ಯಗಳು. ತನ್ನ ಪ್ರಜೆಗಳಿಗೆ ಕನಿಷ್ಠ ಈ ನಾಲ್ಕನ್ನು ಖಾತರಿಪಡಿಸದ ಯಾವ ಸರ್ಕಾರಕ್ಕೂ ತನ್ನದು ಜನಪರ ಸರ್ಕಾರ ಎಂದು ಹೇಳಿಕೊಳ್ಳುವ ಯಾವ ನೈತಿಕ ಹಕ್ಕೂ ಇರುವುದಿಲ್ಲ. ಆದರೆ ಆರು ದಶಕಗಳಾದರೂ ಇನ್ನು ಸಹ ದೇಶದ ಕೋಟ್ಯಾಂತರ ಜನರ ಈ ಕನಿಷ್ಠ ಅಗತ್ಯಗಳನ್ನು ಈ ವ್ಯವಸ್ಥೆಗೆ ಪೂರೈಸಲಾಗಿಲ್ಲ ಎಂಬುದು ನಾಚಿಕೆಗೇಡಿನ ವಿಚಾರ.

ತಮ್ಮ ತಿಂಗಳ ಆದಾಯದಲ್ಲಿ ಮೂರನೇ ಒಂದು ಭಾಗದಷ್ಟನ್ನು ದಿನನಿತ್ಯದ ಆಹಾರಕ್ಕೆ ಖರ್ಚು ಮಾಡುವ ಕುಟುಂಬವು ವಸತಿ, ಶಿಕ್ಷಣ, ಆರೋಗ್ಯ, ಮನರಂಜನೆ ಇತ್ಯಾದಿಗಳಿಗೆ ಅಗತ್ಯವಿರುವಷ್ಟು ಹಣವನ್ನು ವ್ಯಯಿಸಲಾರದು. ಆ ರೀತಿ ಆಗದೆ ಒಂದು ಸಶಕ್ತ ಸಮಾಜ ನಿರ್ಮಾಣವು ಅಸಾಧ್ಯ. ಆದ್ದರಿಂದಲೇ ಅಂತಹವರಿಗೆ ಅತ್ಯಂತ ಕಡಿಮೆ ದರದಲ್ಲಿ ಪಡಿತರವನ್ನು ನೀಡುವ ವ್ಯವಸ್ಥೆಯು ಜಾರಿಯಲ್ಲಿರಲೇಬೇಕು. ಆದರೆ ಈಗ ಹೊಸ ವ್ಯವಸ್ಥೆಯನ್ನು ಜಾರಿಗೆ ತಂದು ಬಡವರ ರೇಷನ್‌ಕಾರ್ಡ್‌ಗಳನ್ನು ಕಿತ್ತುಕೊಳ್ಳಲಾಗುತ್ತಿದೆ. ಕಾರ್ಡ್ ಕೊಟ್ಟವರಿಗೂ ಅಕ್ಕಿ, ಗೋಧಿ, ಸೀಮೆಎಣ್ಣೆಯ ಪ್ರಮಾಣವನ್ನು ಕಡಿಮೆ ಮಾಡಲಾಗುತ್ತಿದೆ. ಬಿಪಿಎಲ್ ಕಾರ್ಡ್ ಕೊಡಬೇಕಾದೆಡೆ ಎಪಿಎಲ್ ಕಾರ್ಡ್ ಕೊಡಲಾಗಿದೆ. ಅಕ್ಷಯ, ಅಂತ್ಯೋದಯ, ಅನ್ನಪೂರ್ಣ ಹೀಗೆ ವಿವಿಧ ಹೆಸರುಗಳನ್ನು, ಹೊಸ ಹೊಸ ಬಗೆಯ ಕಾರ್ಡ್‌ಗಳನ್ನು ಕೊಡಲಾಗುತ್ತಿದೆ. 2011ರ ಹೊತ್ತಿಗೆ ಇಡೀ ಪಡಿತರ ವ್ಯವಸ್ಥೆಯನ್ನೇ ಇಲ್ಲವಾಗಿಸುವ ಹುನ್ನಾರ ನಡೆದಿದೆ. ಇದಕ್ಕಾಗಿ ಮೊದಲು ಸಮೀಕ್ಷೆ ನಡೆಸಿದ್ದು ಕಾಂಗ್ರೆಸ್ ಸರ್ಕಾರವಾದರೆ ಕಾರ್ಡ್‌ಗಳನ್ನು ಕಿತ್ತುಕೊಂಡಿದ್ದು ಬಿಜೆಪಿ ಮತ್ತು ಜನತಾದಳಗಳು. ತಾನೇ ಕಾರ್ಡ್ ಕಿತ್ತುಕೊಂಡ ಬಿಜೆಪಿ ಪಕ್ಷವು ಈಗ ತಾನೇ ಅದಕ್ಕಾಗಿ ಜನರ ಪರವಾಗಿ ಹೋರಾಟ ಮಾಡುವ ನಾಟಕವಾಡುತ್ತಿದೆ. ಇದನ್ನು ನಾವು ವಿರೋಧಿಸುತ್ತೇವೆ.

- **ಎಲ್ಲಾ ಬಡವರಿಗೂ ಕಡ್ಡಾಯವಾಗಿ ಬಿಪಿಎಲ್ ಕಾರ್ಡ್ ಕೊಡಬೇಕು. ಈಗ ಬಳಸಲಾಗುತ್ತಿರುವ ಮಾನದಂಡಗಳನ್ನು ಬದಲಾಯಿಸಬೇಕು**
- **ಪಡಿತರ ವ್ಯವಸ್ಥೆಗಾಗಿ ನೀಡುತ್ತಿದ್ದ ಅನುದಾನವನ್ನು ಎರಡು ಪಟ್ಟು ಮಾಡಬೇಕು**
- **ಒಬ್ಬ ವ್ಯಕ್ತಿಗೆ ತಿಂಗಳಿಗೆ 12 ಕೆಜಿ ಅಕ್ಕಿ 4 ಕೆಜಿ ಗೋಧಿ ನೀಡಬೇಕು. ಪ್ರತಿ ಕುಟುಂಬಕ್ಕೆ 7 ಕೆಜಿ ಸಕ್ಕರೆ ಮತ್ತು 18 ಲೀಟರ್ ಸೀಮೆಎಣ್ಣೆಯನ್ನು ನೀಡಬೇಕು. ಪಡಿತರದ ಗುಣಮಟ್ಟ ಮತ್ತು ವಿತರಣೆಯಲ್ಲಿನ ಲೋಪದೋಷಗಳನ್ನು ಸರಿಪಡಿಸಬೇಕು.**

ಓಟು ಪಡೆಯಲು ಮತದಾನ ಚೀಟಿಯನ್ನು ಮಾತ್ರ ಉತ್ಸುಕತೆಯಿಂದ ಮಾಡಿಸಿ ಹಂಚುವ ಯಾವ ಪಕ್ಷಗಳೂ ಬಡಜನರಿಗೆ ಮನೆಪಟ್ಟವನ್ನು ಕೊಡಿಸಲು ಮಾತ್ರ ಉತ್ಸುಕತೆ ತೋರಿಲ್ಲ. ರಿಯಲ್ ಎಸ್ಟೇಟ್ ಭೂಗಳ್ಳರಿಗೆ ನಾನಾ ರೂಪಗಳಲ್ಲಿ ಸಾವಿರಾರು ಎಕರೆ ಭೂಮಿಯನ್ನು ವರ್ಗಾಯಿಸುತ್ತಿರುವ ಸರ್ಕಾರಗಳು, ಹಲವಾರು ವರ್ಷಗಳಿಂದ ಬಡವರು ವಾಸಿಸುತ್ತಿರುವ ಕೆಲವು ಅಡಿ ಜಾಗವನ್ನು ಅವರ ಹೆಸರಿಗೆ ಮಾಡಿಕೊಡಲು ಮಾತ್ರ ಇಲ್ಲದ ಕಾನೂನಿನ ತೊಡಕುಗಳನ್ನು ಎದುರಿಸುತ್ತಿವೆಯಂತೆ. ಜನರ ಒತ್ತಾಯದಿಂದಾಗಿ

ಜನತಾ/ಆಶ್ರಯ ಇತ್ಯಾದಿ ಯೋಜನೆಗಳನ್ನು ಮಾಡಿದರೂ ಅರ್ಧಕ್ಕಿಂತ ಹೆಚ್ಚು ಹಣವನ್ನು ಮಧ್ಯವರ್ತಿಗಳು ಕಬಳಿಸಿ ತಿಂದಿದ್ದೆ ಹೆಚ್ಚು. ಲಕ್ಷಾಂತರ ಜನರಿಗೆ ಈ ಕಳಪೆ ಮನೆಗಳು ಸಹ ಲಭ್ಯವಾಗಿಲ್ಲ.

- ಜನರು ಈಗ ವಾಸಿಸುತ್ತಿರುವ ಜಾಗಗಳನ್ನು ಈ ಕೂಡಲೆ ಅವರ ಹೆಸರಿಗೆ ವರ್ಗಾಯಿಸಬೇಕು.
- ಮನೆ ಇಲ್ಲದ ಪ್ರತಿ ಕುಟುಂಬಕ್ಕೂ ಮನೆ ಕಟ್ಟಿಸಿಕೊಡಬೇಕು.

ಅಸಮಾನ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ ಇರುವಾಗ ಶಿಕ್ಷಣ ಮತ್ತು ಆರೋಗ್ಯಗಳನ್ನು ತನ್ನ ಜವಾಬ್ದಾರಿ ಎಂದು ತಿಳಿಯದ ಯಾವುದೇ ವ್ಯವಸ್ಥೆಯು ಪ್ರಜಾಪ್ರಭುತ್ವವಾಗಲು ಸಾಧ್ಯವಿಲ್ಲ. ಈ ಸ್ಪರ್ಧಾಮಯಿ ಜಗತ್ತಿನಲ್ಲಿ ಶಿಕ್ಷಣವೆಂಬುದು ಪೋಟಿ ನಡೆಸಲು ಬೇಕಾದ ಕನಿಷ್ಠ ತಯಾರಿ. ಈ ತಯಾರಿಯಲ್ಲೆ ತಾರತಮ್ಯವನ್ನು ಇಟ್ಟಿರುವ ಸರ್ಕಾರ, ಖಾಸಗಿ ಮತ್ತು ಸರ್ಕಾರಿ ಎರಡು ರೀತಿಯ ಶಿಕ್ಷಣವನ್ನು ನಡೆಸಿಕೊಂಡು ಬರುತ್ತಿವೆ. ಹಣ ಉಳ್ಳವರಿಗೆ ಉತ್ಕೃಷ್ಟ ಶಿಕ್ಷಣವನ್ನು ಖರೀದಿಸಲು ಮತ್ತು ಮಾರಲು ಅವಕಾಶ ನೀಡಿವೆ. ಹಣವಿಲ್ಲದವರಿಗೆ ಎರಡನೆ ದರ್ಜೆಯ ಶಿಕ್ಷಣ ನೀಡಿ ಕೈತೊಳೆದುಕೊಳ್ಳುತ್ತಿವೆ. ಈಗ ಉನ್ನತ ಮತ್ತು ಪ್ರಾಥಮಿಕ ಶಿಕ್ಷಣಗಳೆರಡರಿಂದಲೂ ಸರ್ಕಾರಗಳು ಕ್ರಮೇಣ ಜಾರಿಕೊಳ್ಳತೊಡಗಿವೆ. ಕರ್ನಾಟಕದಲ್ಲಿ ಈ ವರ್ಷ 2000 ಪ್ರಾಥಮಿಕ ಶಾಲೆಗಳನ್ನು ಖಾಸಗಿಯುವರಿಗೆ ವಹಿಸಲು ಟೆಂಡರ್ ಕರೆದಿದೆ. ಸರ್ಕಾರಿ ವಿಶ್ವವಿದ್ಯಾನಿಲಯಗಳಲ್ಲಿ ಪೇಮೆಂಟ್ ಸೀಟುಗಳನ್ನಿಟ್ಟು ಮಾರುತ್ತಿದ್ದಾರೆ. ಅಲ್ಲದೆ ಈಗ ಬಹು ಸುಲಭವಾಗಿ ಖಾಸಗಿ ವಿಶ್ವವಿದ್ಯಾನಿಲಯಗಳನ್ನು ನಡೆಸಲು ಅನುಮತಿ ನೀಡತೊಡಗಿವೆ. ಸರ್ಕಾರಿ ಕಾಲೇಜುಗಳಲ್ಲಿ ಶುಲ್ಕಗಳನ್ನು ಹಲವಾರು ಪಟ್ಟು ಹೆಚ್ಚಿಸಿರುವುದಲ್ಲದೆ, ವಿದ್ಯಾರ್ಥಿಗಳ ಸಂಖ್ಯೆ ಬೆಳೆಯುತ್ತಿದ್ದರೂ, ಬೆಲೆ ಏರಿಕೆಯಾಗುತ್ತಿದ್ದರೂ ಹಾಸ್ಟೆಲ್ ಸಂಖ್ಯೆಯನ್ನೂ ಹೆಚ್ಚಿಸದೆ, ಅನುದಾನವನ್ನು ಹೆಚ್ಚಿಸದೆ ಕಣ್ಣು ಮುಚ್ಚಿ ಕೂತಿವೆ.

## ಜನತೆಯ ಹಕ್ಕೊತ್ತಾಯಗಳು

- **ಪ್ರಾಥಮಿಕ ಶಾಲೆಗಳನ್ನು ಖಾಸಗಿಯವರಿಗೆ ವಹಿಸುವುದು ಈ ಕೂಡಲೇ ನಿಲ್ಲಬೇಕು. ಎಲ್ಲಾ ಪ್ರಾಥಮಿಕ/ಪ್ರೌಢಶಾಲೆಗಳನ್ನು ರಾಷ್ಟ್ರೀಕರಣ ಮಾಡಿ ಸರ್ಕಾರವೇ ವಹಿಸಿಕೊಳ್ಳಬೇಕು. ವಿವಿಧ ಸಮುದಾಯಗಳಿಗೆ ಸಂವಿಧಾನಬದ್ಧ ಹಕ್ಕುಗಳಿಗೆ ಚ್ಯುತಿ ಬರದಂತೆ ಕ್ರಮ ಕೈಗೊಳ್ಳಬೇಕು. ಉನ್ನತ ಶಿಕ್ಷಣಕ್ಕೆ ಅನುದಾನ ಹೆಚ್ಚಿಸಬೇಕು.**
- **ಸಮಾನ ಮತ್ತು ಏಕರೂಪಿ ಶಿಕ್ಷಣ ವ್ಯವಸ್ಥೆಯನ್ನು ಹಂತಹಂತವಾಗಿ ಜಾರಿಗೆ ತರಬೇಕು, ಸಿಬಿಎಸ್ಇ, ಐಸಿಎಸ್ಇ ಶಿಕ್ಷಣ ಮಂಡಳಿಗಳನ್ನು ರದ್ದುಗೊಳಿಸಬೇಕು.**
- **ಸರ್ಕಾರೀ ಶಾಲಾ/ಕಾಲೇಜುಗಳ ಗುಣಮಟ್ಟವನ್ನು ಅಭಿವೃದ್ಧಿಪಡಿಸಬೇಕು. ಕನ್ನಡ ಮತ್ತು ಉರ್ದು ಮಾಧ್ಯಮ ಶಾಲೆಗಳು ನಶಿಸಿ ಹೋಗುವುದನ್ನು ತಡೆಯಬೇಕು. ಉರ್ದು ಶಾಲೆಗಳಲ್ಲಿ ಕನ್ನಡ ಶಿಕ್ಷಕರನ್ನು ಒದಗಿಸಬೇಕು.**

- ಸಮಾಜ ಕಲ್ಯಾಣ ಇಲಾಖೆ ಮತ್ತು ಹಿಂದುಳಿದ ವರ್ಗಗಳ ಇಲಾಖೆಯಡಿ ಬರುವ ಹಾಸ್ಟೆಲ್‌ಗಳ ಅನುದಾನವನ್ನು ಈ ಸಾಲಿನಿಂದಲೇ 800ರೂ.ಗೆ ಹೆಚ್ಚಿಸಬೇಕು. ಹಾಸ್ಟೆಲ್ ಸಂಖ್ಯೆಗಳನ್ನು ಹೆಚ್ಚಿಸಬೇಕು.
- ಉನ್ನತ ಶಿಕ್ಷಣದಲ್ಲಿ ಪೇಮೆಂಟ್ ಸೀಟುಗಳನ್ನು ತೆಗೆಯಬೇಕು, ಶುಲ್ಕ ತಗ್ಗಿಸಬೇಕು.
- ಸ್ಕಾಲರ್‌ಶಿಪ್, ಅನುದಾನ ಹೆಚ್ಚಿಸಬೇಕು, ಬಸ್‌ಪಾಸ್ ದರ ಕಡಿಮೆಯಾಗಬೇಕು.
- ವಿಶ್ವವಿದ್ಯಾಲಯಗಳು ಸಂಶೋಧನಾ ಕೇಂದ್ರಗಳೊಂದಿಗೆ ಸಹಭಾಗಿತ್ವ ಹೊಂದಬೇಕೇ ವಿನಃ ಉದ್ದಿಮೆಗಳ ಜೊತೆ ಅಲ್ಲ.
- ದಲಿತ, ಹಿಂದುಳಿದ, ಗ್ರಾಮೀಣ, ಅಲ್ಪಸಂಖ್ಯಾತ ವಿದ್ಯಾರ್ಥಿಗಳಿಗೆ ಎಲ್ಲಾ ರೀತಿಯ ಶಿಕ್ಷಣದಲ್ಲೂ ಮೀಸಲಾತಿ ಇರಬೇಕು.
- ಅಕ್ಷರ ದಾಸೋಹ ಯೋಜನೆಯನ್ನು ಮುಂದುವರೆಸಬೇಕು. ಅದನ್ನು ಖಾಸಗೀಕರಿಸಲು ನಡೆಸುತ್ತಿರುವ ಹುನ್ನಾರ ಬಂದ್ ಆಗಬೇಕು. ಅಕ್ಷರ ದಾಸೋಹದಡಿ ಕೆಲಸ ಮಾಡುತ್ತಿರುವವರಿಗೆ ಅನುದಾನ ಹೆಚ್ಚಿಸಬೇಕು.

ಆರೋಗ್ಯವಂತ ಜನರಿಲ್ಲದೆ ಆರೋಗ್ಯವಂತ ಸಮಾಜ ಕಟ್ಟಲು ಸಾಧ್ಯವಿಲ್ಲ. ಆದರೆ ಸಾರ್ವಜನಿಕ ಆರೋಗ್ಯವನ್ನು ಸಹ ಮಾರುಕಟ್ಟೆ ಶಕ್ತಿಗಳಿಗೆ ಸರ್ಕಾರ ಬಿಟ್ಟುಕೊಟ್ಟುಬಿಟ್ಟಿದೆ. ನಾಮ ಮಾತ್ರಕ್ಕೆ ಸರ್ಕಾರಿ ಆಸ್ಪತ್ರೆಗಳನ್ನು ಉಳಿಸಿಕೊಂಡು ಕಡುಬಡವರು ಸಹ ವಿಧಿಯಿಲ್ಲದೆ ಪ್ರಾಣ ಉಳಿಸಿಕೊಳ್ಳಲು ಖಾಸಗಿ ಬದುಕಿನ ವ್ಯಾಪಾರಿಗಳಿಗೆ ಹಣ ಸುರಿಯುತಿದ್ದಾರೆ. ಸಾರ್ವಜನಿಕ ಆಸ್ಪತ್ರೆಗಳಲ್ಲಿಯೂ ಹೊರಗುತ್ತಿಗೆ ನೀಡುವ ಮೂಲಕ ಉಚಿತ ಚಿಕಿತ್ಸೆ ಒದಗಿಸುವ ಜವಾಬ್ದಾರಿಯಿಂದ ತಪ್ಪಿಸಿಕೊಳ್ಳುತ್ತಿವೆ. ನಾಡಿನ ವಿವಿಧ ವೈದ್ಯ ಚಿಕಿತ್ಸಾ ವಿಧಾನಗಳನ್ನೆಲ್ಲಾ ಮೂಲೆಗುಂಪು ಮಾಡಿ ಸಾಮ್ರಾಜ್ಯಶಾಹಿ ಹಿಡಿತದಲ್ಲಿರುವ ಆಲೋಪತಿಯನ್ನು ಮಾತ್ರ ಪೋಷಿಸಲಾಗುತ್ತಿದೆ.

## ಜನತೆಯ ಹಕ್ಕೊತ್ತಾಯಗಳು

- ಉಚಿತ ಶಿಕ್ಷಣ ಒದಗಿಸುವ ಜವಾಬ್ದಾರಿಯನ್ನು ಸರ್ಕಾರ ಅಡ್ಡ ಹಾದಿಗಳನ್ನು ಹುಡುಕದೆ ವಹಿಸಿಕೊಳ್ಳಬೇಕು.
- ಖಾಸಗಿ ಆಸ್ಪತ್ರೆಗಳ ಮೇಲೆ ಶುಲ್ಕ ನಿಯಂತ್ರಣವನ್ನು ಜಾರಿಗೆ ತರಬೇಕು.
- ಸ್ಥಳೀಯ ವೈದ್ಯಕೀಯ ವಿಧಾನಗಳಲ್ಲಿ ವೈಜ್ಞಾನಿಕವಾದವುಗಳನ್ನು ಪ್ರೋತ್ಸಾಹಿಸಿ ಬೆಳೆಸಬೇಕು.

# ಅಪಾಯದಲ್ಲಿ ನಮ್ಮ ನೆಲ-ಜಲ-ಭಾಷೆ-ಸಂಸ್ಕೃತಿ

## ಮೀರ್‌ಸಾದಕರು ಮನೆಯಲ್ಲಿದ್ದಾರೆ, ಮನೆ ಮುರುಕರು ದಿಲ್ಲಿಯಲ್ಲಿದ್ದಾರೆ

ಸಂಪತ್ಭರಿತ ನೆಲವನ್ನು, ಸತ್ವಭರಿತ ಭಾಷೆಯನ್ನು, ಭೋರ್ಗರೆಯುವ ನದಿಗಳನ್ನು, ಕಂಗೊಳಿಸುವ ಪರಂಪರೆಯನ್ನು ಹೊಂದಿರುವ ನಾಡು ನಮ್ಮದು. ಬಸವಣ್ಣ- ಮಂಟೆಸ್ವಾಮಿ- ಬಾಬಾಬುಡನ್- ದತ್ತಾತ್ರೇಯರಂಥ ದಾರ್ಶನಿಕರು, ಟಿಪ್ಪು- ಅಬ್ಬಕ್ಕ- ಚೆನ್ನಮ್ಮ- ಹಲಗಲಿಯ ಬೇಡರು- ಈಸೂರು ವೀರರಂತಹ ಧೀರ ಕಲಿಗಳು, ಕುವೆಂಪು-ಬೇಂದ್ರೆಯವರಂಥ ಮಾನವೀಯ ಕವಿ ಹೃದಯಗಳು ಕಟ್ಟಿದ, ಕನಸಿದ ನಾಡಿದು. ಈ ಎಲ್ಲಾ ಕಲಿಗಳ, ಕವಿಗಳ, ದಾರ್ಶನಿಕರ ಆಶಯಗಳಿಗೆ, ವಿಶ್ವಾಸಕ್ಕೆ ನಮ್ಮನ್ನಾಳಿದವರು ದ್ರೋಹ ಬಗೆಯುತ್ತಾ ಬಂದಿದ್ದಾರೆ. ಇದಕ್ಕೆ ನಾವು ಕೊನೆ ಹಾಡಬೇಕಿದೆ.

ಕನ್ನಡ ನೆಲಕ್ಕೆ ರಾಜ್ಯದ ಸ್ಥಾನಮಾನ ಪಡೆಯಲು ಹಲವಾರು ಹೋರಾಟಗಾರರು ಪ್ರಾಣ ನೀಡಬೇಕಾಯಿತು. ಹಾಗೂ ಹೀಗೂ ರಾಜ್ಯವಾಯಿತು. ಆದರೆ ವಿಧಾನಸೌಧದಲ್ಲೆ ಕೂತಿದ್ದ ಮೀರ್‌ಸಾದಕ್ ರಾಜ್ಯ ಸರ್ಕಾರಗಳು, ದಿಲ್ಲಿಯಲ್ಲಿ ವಿರಾಜಿಸಿದ್ದ ಮನೆಮುರುಕ ಕೇಂದ್ರ ಸರ್ಕಾರಗಳು, ಕರ್ನಾಟಕವನ್ನು ಸ್ವತಂತ್ರ, ಸಾರ್ವಭೌಮ ನಾಡಾಗಿ ಬೆಳೆಯಲು ಬಿಡಲಿಲ್ಲ. ಬ್ರಿಟಿಷರು ಕಲಿಸಿದ ಒಡೆದಾಳುವ ನೀತಿಯನ್ನು ಇವರುಗಳು ನಮ್ಮ ಮೇಲೆ ಪ್ರಯೋಗಿಸಿದರು. ವಿವಾದಕ್ಕೆ ಆಸ್ಪದವಿರುವಂತೆ ರಾಜ್ಯಗಳ ಗಡಿಯನ್ನು ವಿಂಗಡಿಸಿ ಅಂದಿನಿಂದ ಇಂದಿನ ತನಕ ನೆರೆಹೊರೆಯವರೊಂದಿಗೆ ಬಗೆಹರಿಯದ ಜಗಳ ಹಚ್ಚಿಟ್ಟರು. ನದಿ ವಿವಾದಕ್ಕೆ ಒಂದು ಶಾಶ್ವತ ನೀತಿ ಸಂಹಿತೆಯನ್ನು ರೂಪಿಸದೆ ಸತತವಾಗಿ ಕಾದಾಡುವಂತೆ ಮಾಡಿದರು. ಈ ವಿಷಯದಲ್ಲಿ ಕರ್ನಾಟಕಕ್ಕಾಗಿದ್ದ ಚಾರಿತ್ರಿಕ ಅನ್ಯಾಯವನ್ನು ಸರಿಪಡಿಸದೆ ವಿವಿಧ ಮುಸುಕುಗಳಲ್ಲಿ ಅದನ್ನು ಮುಂದುವರಿಸುತ್ತಾ ಬಂದರು. ಕನ್ನಡ ನೆಲದಲ್ಲೆ ಕನ್ನಡಕ್ಕೆ ಸ್ಥಾನಮಾನವಿಲ್ಲದಂತೆ ಮಾಡಿದರು. ಹಿಂದಿ-ಇಂಗ್ಲಿಷ್-ಸಂಸ್ಕೃತಗಳನ್ನು ಹೇರಿ ಕನ್ನಡದ ಕೈಕಾಲುಗಳನ್ನು ಕಟ್ಟಿ ಹಾಕಿ ಅದನ್ನು ಬೆಳೆಯದಂತೆ ನೋಡಿಕೊಂಡರು.

ಮಾರ್ವಾಡಿ-ಬನಿಯಾ-ಬೆಂಗಾಲಿ-ತಮಿಳು ಮುಂತಾದ ದೊಡ್ಡ ದೊಡ್ಡ ಅಖಿಲ ಭಾರತ ಉದ್ದಿಮೆದಾರರಿಗೆ ಅವಕಾಶ ನೀಡಿ ಕನ್ನಡಿಗರ ಕಾರ್ಖಾನೆಗಳು ಸ್ಪರ್ಧಿಸದೆ ಸೋಲುವಂತೆ ಮಾಡಿದರು. ರಾಜ್ಯದ ಹಕ್ಕುಗಳನ್ನೆಲ್ಲಾ ಕೇಂದ್ರ ಬಾಚಿಕೊಳ್ಳುತಿದ್ದರೂ ಬಾಯಿಮುಚ್ಚಿ ಕೊಳ್ಳೆಗೆ ಅವಕಾಶ ಮಾಡಿಕೊಟ್ಟರು. ಒಂದೆಡೆ ಹೊರಗಡೆಯ ಶತ್ರುವನ್ನು ಒಳಗೆ ಬಿಟ್ಟುಕೊಂಡರು; ಮತ್ತೊಂದೆಡೆ ಈ ನೆಲದ ಭಾಷೆಗಳೆ ಆದ ಉರ್ದು-ತುಳು- ಕೊಡವ ಮುಂತಾದ ಭಾಷೆಗಳನ್ನು ಪರಕೀಯ ಎಂಬಂತೆ ಕಂಡರು.

ಈಗ ಬಿಜೆಪಿ ಮತ್ತು ಸಂಘಪರಿವಾರಗಳು ವಂಚಕ ವಿಧಾನದಲ್ಲಿ ಇದರ ಮೇಲೆ ಪ್ರಹಾರ ನಡೆಸಿವೆ. ಬಸವಣ್ಣನವರು ಮತ್ತು ಶರಣ ಚಳುವಳಿಯು ಎತ್ತಿ ಹಿಡಿದ ಕನ್ನಡ ಈ ಸನಾತನವಾದಿಗಳಿಗೆ ಮಲತಾಯಿ ಭಾಷೆ. ಅವರಿಗೆ ಸಂಸ್ಕೃತ ದೇವ ಭಾಷೆ, ಹಿಂದಿ ಭಾರತ್ ಮಾತೆಯ ಭಾಷೆ. ಸಂದರ್ಭದ ಉಪಯೋಗ ಮಾಡಿಕೊಳ್ಳಲು ಇಂಗ್ಲಿಷ್ ಅವಕಾಶವಾದಿ ಭಾಷೆ. ಇವರ ನರ ನಾಡಿಗಳಲ್ಲಿ ಕನ್ನಡದ ಬಿಸಿ ಇಲ್ಲ. ಇದಲ್ಲದೆ ನೂರಾರು ವರ್ಷಗಳಿಂದ ಧರ್ಮದ ಎಲ್ಲೆಗಳನ್ನು ಮೀರಿ ಸೌಹಾರ್ದತೆಯ ಮಾದರಿಯಾಗಿ ಬದುಕಿದ ನಮ್ಮ ಪೂರ್ವಜರ ಪರಂಪರೆಯನ್ನು ನಾಶಮಾಡಿ ಧರ್ಮಾಂಧತೆಯ, ವಿದ್ವೇಷದ ಕಲ್ಮಶವನ್ನು

ಕನ್ನಡನಾಡಲ್ಲಿ ಬೆಳೆಸುತ್ತಿದ್ದಾರೆ. ಇವರು ಅಧಿಕಾರಕ್ಕೆ ಬಂದರೆ ನಮ್ಮ ಭಾಷೆ ಸಂಸ್ಕೃತಿ ಮತ್ತಷ್ಟು ಅಪಾಯಕ್ಕೀಡಾಗುವುದರಲ್ಲಿ ಸಂಶಯವಿಲ್ಲ.

## ಜನತೆಯ ಹಕ್ಕೊತ್ತಾಯಗಳು

- **ಕರ್ನಾಟಕದಲ್ಲಿ ಕನ್ನಡಕ್ಕೆ ಅಗ್ರ ಸ್ಥಾನ ಸಿಗಬೇಕು. ಇಂಗ್ಲಿಷ್-ಹಿಂದಿ-ಸಂಸ್ಕೃತಗಳ ಮೇಲಾಧಿಪತ್ಯವನ್ನು ಅಂತ್ಯಗೊಳಿಸಬೇಕು. ಕರ್ನಾಟಕದ ಉರ್ದು-ತುಳು-ಕೊಡವ ಭಾಷೆಗಳಿಗೂ ಬೆಳೆಯಲು ಸೂಕ್ತ ಅವಕಾಶ ಒದಗಿಸಿಕೊಡಬೇಕು.**
- **ಕರ್ನಾಟಕದ ನೆಲ-ಜಲ ವಿವಾದಕ್ಕೆ ಶಾಶ್ವತ ಪರಿಹಾರ ರೂಪಿಸಲು ಕೇಂದ್ರದ ವಿರುದ್ಧ ಇಡೀ ಕರ್ನಾಟಕವನ್ನು ಒಟ್ಟು ಮಾಡಿ ಹೋರಾಟ ಪ್ರಾರಂಭಿಸಬೇಕು.**
- **ಪಾಶ್ಚಿಮಾತ್ಯ ಅಥವಾ ಸನಾತನ ಸಂಸ್ಕೃತಿಯನ್ನು ನಿರಾಕರಿಸಿ ಈ ನೆಲದ ಸಂಸ್ಕೃತಿಯನ್ನು ಬೆಳೆಸಬೇಕು.**
- **ಕೋಮುವಾದಿಗಳನ್ನು ಹತ್ತಿಕ್ಕಬೇಕು, ಸೌಹಾರ್ದ ಸಂಸ್ಕೃತಿಯನ್ನು ಕಾಪಾಡಬೇಕು.**

## ಭ್ರಷ್ಟಾಚಾರ, ಬೆಲೆ ಏರಿಕೆ-ಆಳುವವರ ಹಗಲು ಸುಲಿಗೆ

ಭ್ರಷ್ಟಾಚಾರ ಈ ವ್ಯವಸ್ಥೆಯ ಬುನಾದಿಯಾಗಿ ಹೋಗಿದೆ. ಇದು ಸರ್ವ ಪಕ್ಷ-ಸರ್ವ ಸರ್ಕಾರ-ಸರ್ವ ಇಲಾಖೆ-ಸರ್ವ ಸ್ತರಗಳಿಗೆ ವ್ಯಾಪಿಸಿರುವ ಸರ್ವ ವ್ಯಾಪಿ ವಿಷಕಳೆಯಾಗಿ ಹೋಗಿದೆ. ಇದೊಂದು ರೀತಿಯ ಸಾಮಾಜಿಕ ಮಾನ್ಯತೆಯನ್ನು ಪಡೆದುಕೊಳ್ಳುವ ಮಟ್ಟಕ್ಕೆ ಹೋಗುತ್ತಿರುವುದು ಅಪಾಯಕಾರಿಯಾಗಿದೆ. ರಾಜಕಾರಣಿಗಳಿಗೆ ಮತ್ತು ಅಧಿಕಾರಿಗಳಿಗೆ ಹಣ ಮಾಡಲು ಇದು ಅಧಿಕೃತ ಮಾರ್ಗವಾಗಿದೆ.

ಲಂಚಾಧಾರಿತ ಸರ್ಕಾರಗಳು ದೇಶದ ಮಾರುಕಟ್ಟೆಯನ್ನು ನಿಯಂತ್ರಿಸುತ್ತಿರುವ ದೊಡ್ಡ ವ್ಯಾಪಾರಿ ಗೂಳಿಗಳಿಗೆ ಕಡಿವಾಣ ಹಾಕದೆ ಮೇಯಲು ಬಿಟ್ಟಿರುವುದರಿಂದ ದಿನನಿತ್ಯದ ಅಗತ್ಯ ವಸ್ತುಗಳ ಬೆಲೆಗಳು ಹೆಚ್ಚಾಗುತ್ತಲೇ ಇವೆ. ಸಾಲದೆಂಬಂತೆ ವಿದ್ಯುತ್-ನೀರು ಸರಬರಾಜು-ಪೆಟ್ರೋಲ್ ಮುಂತಾದವುಗಳನ್ನು ಖಾಸಗಿಯವರಿಗೆ ಪರಭಾರೆ ಮಾಡಿಕೊಡುತ್ತಿರುವುದರಿಂದ ಅವರ ಹಿತವನ್ನು ಗಮನದಲ್ಲಿಟ್ಟುಕೊಂಡು ಎಲ್ಲದರ ಬೆಲೆ ಹೆಚ್ಚಿಸಲಾಗುತ್ತಿದೆ. ಜನರ ಸುಲಿಗೆ ಅಧಿಕೃತವಾಗಿ ನಡೆಯುತ್ತಿದೆ. ಸರ್ಕಾರ ಒಂದೆಡೆ ಬಂಡವಾಳಶಾಹಿಗಳಿಗೆ ನಾನಾ ರೀತಿಯ ತೆರಿಗೆ ವಿನಾಯಿತಿ ನೀಡುತ್ತಿದೆ. ಇನ್ನೊಂದೆಡೆ ವ್ಯಾಟ್ ಅನ್ನು ಜಾರಿಗೆ ತಂದು ಪ್ರತಿ ಚಿಲ್ಲರೆ ಸಾಮಾನು ಖರೀದಿಸುವವರಿಂದಲೂ ಶೇ.4ರ ಅಧಿಕ ತೆರಿಗೆಯನ್ನು ವಸೂಲು ಮಾಡುತ್ತಿದೆ. ರಿಯಲ್ ಎಸ್ಟೇಟ್ ದರಗಳು ಆಕಾಶಕ್ಕೆ ಹಾರಿರುವುದರಿಂದ ಮನೆ ಖರೀದಿಸುವ ಮಾತಂತೂ ಬಡವರಿಗೆ ದೂರದ ಮಾತಾಯಿತು. ಮನೆ ಬಾಡಿಗೆಗಳು ದುಪ್ಪಟ್ಟು ಹೆಚ್ಚಾಗಿವೆ. ಒಟ್ಟಾರೆ ಮನೆ ಖರ್ಚುಗಳು ಜಾಗತೀಕರಣದ ನಂತರ ದುಪ್ಪಟ್ಟಿಗಿಂತ ಹೆಚ್ಚಾಗಿವೆ. ಇದೇನು ಸಹಜವಾಗಿ ಆಗಿರುವ ಹೆಚ್ಚಳವಲ್ಲ-ಜನ ಸಾಮಾನ್ಯರಾದ ನಮ್ಮನ್ನು ದೋಚಲು ಆಳುವವರು ಅನುಸರಿಸುತ್ತಿರುವ ಕುತಂತ್ರಗಳಿಂದ, ಹಗಲು ಸುಲಿಗೆಗಳಿಂದ ಏರ್ಪಟ್ಟಿರುವ ಪರಿಸ್ಥಿತಿ.

## ಜನತೆಯ ಹಕ್ಕೊತ್ತಾಯಗಳು

- ಭ್ರಷ್ಟಾಚಾರವನ್ನು ತಡೆಯಲು ಸಮಾಜದ ಪ್ರಾಮಾಣಿಕ ಪ್ರತಿನಿಧಿಗಳ ಜನಸಮಿತಿಗಳನ್ನು ರಚಿಸಿ ಅದಕ್ಕೆ ಅಧಿಕಾರವನ್ನು ನೀಡಬೇಕು.
- ಮಾರುಕಟ್ಟೆ ಬೆಲೆಗಳನ್ನು ನಿಯಂತ್ರಿಸಲು ಸರ್ಕಾರ ಮಧ್ಯಪ್ರವೇಶಿಸಬೇಕು.
- ವಿದ್ಯುತ್-ಸಾರಿಗೆ-ನೀರು ಸರಬರಾಜು ಇತ್ಯಾದಿ ಉದ್ದಿಮೆಗಳನ್ನು ಖಾಸಗಿಯವರಿಗೆ ಒಪ್ಪಿಸಬಾರದು. ಮೂರೂ ಕ್ಷೇತ್ರಗಳಲ್ಲಿ ಬೆಲೆಯನ್ನು ಈಗಿರುವುದರಲ್ಲಿ ಶೇ.30ರಷ್ಟನ್ನು ಈ ಕೂಡಲೇ ಕಡಿಮೆ ಮಾಡಬೇಕು.
- ವ್ಯಾಟ್‌ಅನ್ನು ರದ್ದು ಮಾಡಿ ಜನಸಾಮಾನ್ಯರ ಸುಲಿಗೆಯನ್ನು ನಿಲ್ಲಿಸಬೇಕು.

## ಜನರ ಹೋರಾಟಗಳಿಗೆ ಮನ್ನಣೆ ನೀಡಿ-
## ಜನ ವಿರೋಧಿ ಯೋಜನೆಗಳನ್ನು ಕೈಬಿಡಿ

ಮೇಲೆ ಉಲ್ಲೇಖಿಸಲಾದ ಹಕ್ಕೊತ್ತಾಯಗಳಷ್ಟೇ ಅಲ್ಲದೆ ಜನರು ಹಲವಾರು ವರ್ಷಗಳಿಂದ ಹೋರಾಟ ಮಾಡಿಕೊಂಡು ಬಂದಿರುವ ಕೆಲವು ಬೇಡಿಕೆಗಳ ಬಗ್ಗೆ ಈ ಪ್ರಣಾಳಿಕೆ ಮೂಲಕ ಗಮನ ಸೆಳೆಯಲು ಬಯಸುತ್ತೇವೆ. ಈ ಕೆಳಗಿನ ಹಕ್ಕೊತ್ತಾಯಗಳ ಬಗ್ಗೆ ನಿಮ್ಮ ಪಕ್ಷಗಳ ನಿಲುವೇನೆಂಬುದನ್ನು ಸ್ಪಷ್ಟಪಡಿಸಲು ಮತ್ತು ಅವುಗಳ ಬಗ್ಗೆ ಕೂಡಲೆ ಕ್ರಮ ಕೈಗೊಳ್ಳಲು ಆಗ್ರಹಿಸುತ್ತಿದ್ದೇವೆ.

- ನಂದಗುಡಿ ಮತ್ತು ಕೊಪ್ಪಳ ಎಸ್‌ಇಜೆಡ್ ಗಳನ್ನು ಒಳಗೊಂಡಂತೆ ಎಲ್ಲಾ ಎಸ್‌ಇಜೆಡ್ ಗಳನ್ನು ರದ್ದು ಮಾಡಿ.
- ಜನರು ಒಕ್ಕೊರಲಿನಿಂದ ವಿರೋಧಿಸುತ್ತಿರುವ ಚಾಮಲಾಪುರ ಹಾಗೂ ನಾಗಾರ್ಜುನ ಉಷ್ಣ ವಿದ್ಯುತ್ ಸ್ಥಾವರಗಳನ್ನು ರದ್ದು ಮಾಡಿ.
- ನಾಡಿನ ಸಂಪತ್ತನ್ನು ಬರಿದುಮಾಡುತ್ತಿರುವ ಸಂಡೂರು, ಬೇಲಿಕೇರಿ ಮುಂತಾದ ಕಡೆಯ ಗಣಿಗಾರಿಕೆಗಳನ್ನು ಕೂಡಲೆ ಬಂದ್ ಮಾಡಿ. ಆ ಮಾಲೀಕರು ಕೊಳ್ಳೆಹೊಡೆದಿರುವ ಅನೈತಿಕ ಹಣವನ್ನು ವಶಪಡಿಸಿಕೊಳ್ಳಿ.
- ನ್ಯಾಷನಲ್ ಪಾರ್ಕ್ ಯೋಜನೆಗಳನ್ನು ರದ್ದು ಮಾಡಿ, ಆದಿವಾಸಿಗಳನ್ನು ಎತ್ತಂಗಡಿ ಮಾಡುವ ಆಲೋಚನೆಯನ್ನು ಕೈಬಿಡಿ.
- ಬಾಬಾಬುಡನ್‌ಗಿರಿಯನ್ನು ಜನರ ಭಾವೈಕ್ಯತಾ ಕೇಂದ್ರವಾಗಿ ಉಳಿಸಿ. ಅಲ್ಲಿನ ಶ್ರೀ ಗುರುದತ್ತಾತ್ರೇಯ ಸ್ವಾಮಿ ಬಾಬಾಬುಡನ್ ದರ್ಗಾವನ್ನು ಮತೀಯ ದುರಭಿಮಾನಿ ಕೇಂದ್ರ ಮಾಡಲು ಜನರನ್ನು ಪ್ರಚೋದಿಸುತ್ತಿರುವ ಸಂಘ ಪರಿವಾರದ ಮೇಲೆ ಕ್ರಮ ಕೈಗೊಳ್ಳಿ.

- ಪಡಿತರ ಚೀಟಿ ವಿತರಣೆಯಲ್ಲಿರುವ ವಂಚನೆಯನ್ನು ಕೂಡಲೆ ನಿಲ್ಲಿಸಿ. ಎಲ್ಲ ಬಡವರಿಗೂ ಪಡಿತರ ಚೀಟಿ ನೀಡಿ, ರಿಯಾಯಿತಿ ದರದಲ್ಲಿ ಅಕ್ಕಿ, ಸೀಮೆ ಎಣ್ಣೆ ಇತ್ಯಾದಿ ದಿನ ನಿತ್ಯದ ವಸ್ತುಗಳನ್ನು ಸರಬರಾಜು ಮಾಡಿ.
- ಚಿಲ್ಲರೆ ವ್ಯಾಪಾರ ಕ್ಷೇತ್ರಕ್ಕೆ ಕಾರ್ಪೊರೇಟ್‌ಗಳ ಪ್ರವೇಶವನ್ನು ನಿಷೇಧಿಸಿ.
- ಹೋರಾಟಗಾರರ ಮೇಲೆ ಪೊಲೀಸರು ನಡೆಸಿರುವ ದೌರ್ಜನ್ಯಗಳ ಬಗ್ಗೆ ತನಿಖೆಯಾಗಲಿ. ಹೋರಾಟಗಾರರ ಮೇಲೆ ಹಾಕಿರುವ ಕೇಸುಗಳನ್ನು ಹಿಂತೆಗೆದುಕೊಳ್ಳಿ
- ಮಾನವ ಹಕ್ಕುಗಳ ವಿಷಯದಲ್ಲಿ ಎನ್‌ಕೌಂಟರ್, ಲಾಕಪ್‌ಡೆತ್, ಚಿತ್ರಹಿಂಸೆ ಮುಂತಾದ ಪ್ರಕರಣಗಳಿಗೆ ಸಂಬಂಧಿಸಿದಂತೆ ಕೇಂದ್ರ ಮಾನವ ಹಕ್ಕುಗಳ ಆಯೋಗದ ಶಿಫಾರಸ್ಸಿನಂತೆ ಆರೋಪಿ ಪೊಲೀಸರ ಮೇಲೆ ಸೂಕ್ತ ಕ್ರಮಗಳನ್ನು ತೆಗೆದುಕೊಳ್ಳಬೇಕು. ವಿಚಾರಣಾಧೀನ ಕೈದಿಗಳಾಗಿ, ವಿಚಾರಣೆಯಿಲ್ಲದೆ ಕೊಳೆಯುತ್ತಿರುವ ಕೈದಿಗಳ ಬಿಡುಗಡೆಗೆ ಸೂಕ್ತ ಕಾನೂನು ಕ್ರಮ ಕೈಗೊಳ್ಳಬೇಕು.

# ಜನತೆಯ ಪ್ರಣಾಳಿಕೆಯ ಶರತ್ತು ಮತ್ತು ಅದರ ಅನುಷ್ಠಾನಕ್ಕಾಗಿ ಜನಾಂದೋಲನ

ಈ ಜನತೆಯ ಪ್ರಣಾಳಿಕೆಯ ಹಿಂದಿನ ಪುಟಗಳಲ್ಲಿ ಬರೆಯಲಾಗಿರುವ ವಿವರಗಳು ಇಂದಿನ ಕರ್ನಾಟಕದ ಪರಿಸ್ಥಿತಿಯ ಬಗ್ಗೆ ಮಾತನಾಡಿವೆ. ಜೊತೆಗೆ ಬರಲಿರುವ ಚುನಾವಣೆಯಲ್ಲಿ ಈ ನಾಡಿನ ನಿಜವಾದ ಪ್ರಭುಗಳಾಗಬೇಕಾದ ಜನತೆಯ ಪಾತ್ರವೇನು ಎಂಬ ಬಗ್ಗೆ ಹೇಳಿವೆ. ವಿವಿಧ ಅಧ್ಯಾಯಗಳಲ್ಲಿ ಸ್ಪಷ್ಟವಾಗುವಂತೆ ಯಾವುದೇ ಕಾರಣಕ್ಕೂ ಕೋಮುವಾದಿ ಬಿಜೆಪಿಯನ್ನು ವಿರೋಧಿಸಬೇಕಾದುದು ಅತ್ಯಂತ ಅಗತ್ಯವಾಗಿದೆ. ದಕ್ಷಿಣ ಭಾರತದಲ್ಲಿ ಕರ್ನಾಟಕವನ್ನು ತಮ್ಮ ಹೆಬ್ಬಾಗಿಲನ್ನಾಗಿಸಿಕೊಳ್ಳುತ್ತೇವೆ ಎಂದು ಬೀಗುತ್ತಿರುವ ಅವರಿಗೆ ತಾವು ಜನಬೆಂಬಲಕ್ಕೆ ಪಾತ್ರರಲ್ಲ ಎಂದು ಹೇಗೂ ಗೊತ್ತಾಗಿದೆ. ಚುನಾವಣೆಯಲ್ಲಿ ಸಂಪೂರ್ಣವಾಗಿ ಸೋಲಿಸುವ ಮೂಲಕ ಸರಿಯಾದ ಪಾಠವನ್ನು ಕರ್ನಾಟಕದ ಪ್ರಜ್ಞಾವಂತ ಜನತೆ ಕಲಿಸಬೇಕಿದೆಯಷ್ಟೆ.

ಆದರೆ ಇತರ ಪಕ್ಷಗಳು ಇದುವರೆಗೂ ಹಲವು ಜನವಿರೋಧಿ ನೀತಿಗಳನ್ನೇ ಅನುಸರಿಸುತ್ತಾ ಬಂದಿರುವಾಗ ಅವರಿಗೆ ಬೇಷರತ್ತಾಗಿ ನಮ್ಮ ಬೆಂಬಲವನ್ನು ನೀಡುವುದು ಸಾಧ್ಯವಿಲ್ಲ. ಇದರಲ್ಲಿ ಪದೇ ಪದೇ ಹೇಳಿರುವಂತೆ ಇನ್ನು ಮುಂದೆ ನಾವು ಕೇವಲ ಪ್ರೇಕ್ಷಕರಾಗಿ ಉಳಿಯಲು ಸಾಧ್ಯವಿಲ್ಲ. ನಿಜವಾದ ಪ್ರಜಾತಂತ್ರವನ್ನು ತರುವ ನಿಟ್ಟಿನಲ್ಲಿ ನಮ್ಮ ಪ್ರಯತ್ನ ಇದರ ಮುಖಾಂತರ ಆರಂಭವಾಗಿದೆ. ಈ ಪ್ರಣಾಳಿಕೆಯಲ್ಲಿ ನಾಡಿನ ಜನತೆಯ ಪರವಾಗಿ ಮುಂದಿಟ್ಟಿರುವ ಷರತ್ತುಗಳನ್ನು ಒಪ್ಪಬೇಕು ಮತ್ತು ಅವನ್ನು ಜಾರಿ ಮಾಡುವ ಬದ್ಧತೆಯನ್ನು ಪ್ರದರ್ಶಿಸಬೇಕು. ಅಂತಹವರಿಗೆ ಮಾತ್ರ ಬೆಂಬಲಿಸಲು ಸಾಧ್ಯ.

ನಾಡಬಾಂಧವರೇ, ಬನ್ನಿ

ನಾಡು, ನಾಡಿನ ಜನರು ಸಂಕಷ್ಟ ಎದುರಿಸುತ್ತಿರುವ ಈ ಸಂದರ್ಭದಲ್ಲಿ ಜನಸಾಮಾನ್ಯರಾದ ನಾವು ಪ್ರೇಕ್ಷಕರಾಗುಳಿಯದೆ ಸಂಘಟಿತ ಶಕ್ತಿಯಾಗೋಣ. ಅಪಾಯಕಾರಿ ಕೋಮುವಾದಿಗಳು ಅಧಿಕಾರಕ್ಕೆ ಬರದಂತೆ ತಡೆಯೋಣ. ನಾವು ಮುಂದಿಟ್ಟಿರುವ ಹಕ್ಕೊತ್ತಾಯಗಳಿಗೆ ಉತ್ತರಿಸುವಂತೆ ಇತರೆ ಪಕ್ಷಗಳನ್ನು ಒತ್ತಾಯಿಸೋಣ. ಅಭಿವೃದ್ಧಿಯ ದಿಕ್ಕು ಬದಲಾಗಬೇಕೆಂದು ಆಗ್ರಹಿಸೋಣ. ಪ್ರಣಾಳಿಕೆಯ ಸಾರಕ್ಕೆ ಬದ್ಧವಾಗಿರಲು ಒಪ್ಪುವ ಇದ್ದಿದ್ದರಲ್ಲೆ ಉತ್ತಮ ಅರ್ಹ ಅಭ್ಯರ್ಥಿಯನ್ನು ಬೆಂಬಲಿಸೋಣ. ಪ್ರಣಾಳಿಕೆಯಲ್ಲಿ ಎಲ್ಲ ಜನ ಸಮುದಾಯಗಳ ಪರವಾಗಿ ಮುಂದಿಡಲಾಗಿರುವ ಹಕ್ಕೊತ್ತಾಯಗಳ ಜಾರಿಗಾಗಿ ಸಂಯುಕ್ತ ಜನಾಂದೋಲನವನ್ನು ಕಟ್ಟುವ ಪ್ರತಿಜ್ಞೆ ಮಾಡೋಣ. ಇಂದು ಇದನ್ನು ಒಪ್ಪುವುದಾಗಿ ಹೇಳುವ ಪಕ್ಷಗಳೂ ಅದನ್ನು ಸುಲಭವಾಗಿ ಜಾರಿ ಮಾಡುವುದಿಲ್ಲ ಎಂಬುದು 60 ವರ್ಷಗಳ ಅನುಭವ ಹೇಳುತ್ತದೆ. ಹಾಗಾಗಿ ಚುನಾವಣೆಯ ನಂತರವೂ ಜನಾಂದೋಲನವನ್ನು ಮುಂದುವರೆಸೋಣ.

–ಪ್ರಜಾಪ್ರಭುತ್ವಕ್ಕಾಗಿ ಜನರ ಒಕ್ಕೂಟ

## ಪ್ರಜಾಪ್ರಭುತ್ವಕ್ಕಾಗಿ ಜನರ ಒಕ್ಕೂಟ

**ಕಾರ್ಯಾಧ್ಯಕ್ಷರು**

ಪ್ರೊ. ಎಚ್.ಎಲ್.ಕೇಶವಮೂರ್ತಿ

## ಅಧ್ಯಕ್ಷೀಯ ಮಂಡಳಿ

ಗಣಪತಿಯಪ್ಪ, ಕಾಗೋಡು
ಪ್ರೊ. ಜಿ.ಆರ್. ಲಕ್ಷ್ಮಣರಾವ್, ಮೈಸೂರು
ಪೊನ್ನಮ್ಮಾಳ್, ಶಿವಮೊಗ್ಗ
ಪ್ರೊ. ಯು.ಆರ್.ಅನಂತಮೂರ್ತಿ, ಬೆಂಗಳೂರು
ಗೌರಿಲಂಕೇಶ್, ಬೆಂಗಳೂರು
ಪ್ರೊ. ಬರಗೂರು ರಾಮಚಂದ್ರಪ್ಪ, ಬೆಂಗಳೂರು
ಬಸವರಾಜ ದೇವರು ಸ್ವಾಮೀಜಿ, ಧಾರವಾಡ
ಡಾ.ಜಿ.ರಾಮಕೃಷ್ಣ, ಬೆಂಗಳೂರು
ಕಲ್ಕುಳಿ ವಿಠಲ ಹೆಗ್ಡೆ, ಶೃಂಗೇರಿ
ಫಾ. ಜಾನ್ ಫರ್ನಾಂಡೀಸ್, ಮಂಗಳೂರು
ಪ್ರೊ.ನಗರಿ ಬಾಬಯ್ಯ, ಬೆಂಗಳೂರು
ಡಾ.ಅವಾಜ್ ಷರೀಫ್, ಬೆಂಗಳೂರು
ಎಂ.ವೆಂಕಟಸ್ವಾಮಿ, ಬೆಂಗಳೂರು
ಪ್ರೊ.ಲಿಂಗದೇವರು ಹಳೇಮನೆ, ಮೈಸೂರು
ಸಿ.ಎನ್.ಶೆಟ್ಟಿ, ಮಂಗಳೂರು
ಪ್ರೊ. ಶ್ರೀಕಂಠ ಕೂಡಿಗೆ, ಶಿವಮೊಗ್ಗ
ಚಂದ್ರಶೇಖರ ತೋರಣಘಟ್ಟ, ದಾವಣಗೆರೆ
ಇಂದೂಧರ ಹೊನ್ನಾಪುರ, ಬೆಂಗಳೂರು
ಅಬ್ದುಸ್ಸಲಾಂ ಪುತ್ತಿಗೆ, ಮಂಗಳೂರು
ಅಲ್ಲಮಪ್ರಭು ಬೆಟ್ಟದೂರು, ಕೊಪ್ಪಳ
ಶಿವಲಿಂಗಂ, ಬೆಂಗಳೂರು
ಸಾರಾ ಅಬೂಬಕರ್, ಮಂಗಳೂರು
ಸುನಂದ ಜಯರಾಂ, ಮಂಡ್ಯ
ಗೀತಾ ಮೆನನ್, ಬೆಂಗಳೂರು
ಪ್ರೊ.ಹಸನತ್ ಮನ್ಸೂರ್, ಬೆಂಗಳೂರು
ಶೀಲಾ ರಾಮನಾಥನ್, ಬೆಂಗಳೂರು
ಹೇಮಕ್ಕ, ಬೆಂಗಳೂರು
ಎಸ್.ಮಾಲತಿ, ಸಾಗರ
ಮಾಲಿನಿ, ಚನ್ನಪಟ್ಟಣ
ಸಿಸ್ಟರ್ ಸಿಲಿಯಾ, ಬೆಂಗಳೂರು
ಬಿ.ಟಿ.ಜಾಹ್ನವಿ, ದಾವಣಗೆರೆ
ಮೀರಾ ನಾಯಕ್, ಮೈಸೂರು
ಮಮತಾ ಜಿ.ಸಾಗರ, ಬೆಂಗಳೂರು
ಕೆಜಿಎಸ್ ಮರಿಯಪ್ಪ, ಬೆಂಗಳೂರು
ಪ್ರೊ.ಹಸನ್ ಮನ್ಸೂರ್, ಬೆಂಗಳೂರು
ಜಾಣಗೆರೆ ವೆಂಕಟರಾಮಯ್ಯ, ಬೆಂಗಳೂರು
ಜಿ.ಶ್ರೀನಿವಾಸನ್, ಬೆಂಗಳೂರು
ಪ್ರೊ.ಲಕ್ಷ್ಮೀಸಾಗರ್, ಬೆಂಗಳೂರು
ಚನ್ನಬಸವಣ್ಣ, ಬಳ್ಳಾರಿ
ಬಸವರಾಜ್ ಕೌತಾಳ್, ಬೆಂಗಳೂರು
ನಾಗತಿಹಳ್ಳಿ ಚಂದ್ರಶೇಖರ್ ಬೆಂಗಳೂರು
ರವೀಂದ್ರ ರೇಷ್ಮೆ, ಬೆಂಗಳೂರು
ಶಿವಸುಂದರ್, ಬೆಂಗಳೂರು
ಜಿ.ರಾಜಶೇಖರ, ಉಡುಪಿ
ಗೋಪಾಲ ಬಿ.ಶೆಟ್ಟಿ, ಉಡುಪಿ
ಪ್ರೊ.ಕಾಳೇಗೌಡ ನಾಗವಾರ, ಮೈಸೂರು
ಪ್ರಸನ್ನ, ಹೆಗ್ಗೋಡು
ಬಾಲಗುರುಮೂರ್ತಿ, ಬೆಂಗಳೂರು
ಪಟ್ಟಾಭಿರಾಮ ಸೋಮಯಾಜಿ, ಮಂಗಳೂರು
ಸುರೇಶ್‌ಭಟ್, ಮಂಗಳೂರು
ಪ್ರೊ.ವಿ.ಎಸ್.ಶ್ರೀಧರ್, ಬೆಂಗಳೂರು
ರೂತ್ ಮನೋರಮ, ಬೆಂಗಳೂರು
ಪಟಾಪಟ್ ನಾಗರಾಜ್, ಬೆಂಗಳೂರು
ಪ್ರೊ.ಹಯವದನ ಉಪಾಧ್ಯ, ಉಡುಪಿ
ಪ್ರೊ. ಮುರುಗೇಶ್, ಉಡುಪಿ
ಪ್ರೊ.ಎನ್.ವಿ.ನರಸಿಂಹಯ್ಯ, ಬೆಂಗಳೂರು
ಪ್ರೊ.ಕೆ.ಫಣಿರಾಜ್, ಉಡುಪಿ
ಪುಟ್ಟಯ್ಯ, ಶಿವಮೊಗ್ಗ
ಡಾ.ಎಚ್.ಗಿರಿಜಮ್ಮ, ದಾವಣಗೆರೆ
ಕೋಟಗಾನಹಳ್ಳಿ ರಾಮಯ್ಯ, ಕೋಲಾರ
ರೆ.ಫಾ.ಮನೋಹರ ಚಂದ್ರಪ್ರಸಾದ್, ಬೆಂಗಳೂರು
ಶೆ.ಬೋ.ರಾಧಾಕೃಷ್ಣ, ಬೆಂಗಳೂರು
ಜಂಬಣ್ಣ ಅಮರಚಿಂತ, ರಾಯಚೂರು
ಡಾ.ನಿಂಗಪ್ಪ ಮುದೇನೂರು, ಹಾವೇರಿ
ಗಂಗಣ್ಣ, ಬೆಂಗಳೂರು
ಲಕ್ಷ್ಮೀಪತಿ ಕೋಲಾರ

ಎಚ್.ಆರ್.ಸೋಮಶೇಖರ್, ಶಿವಮೊಗ್ಗ
ಎಂ.ಬಿ.ನಟರಾಜ್, ಶಿವಮೊಗ್ಗ
ಡಾ.ಕಾ.ವೆಂ.ಶ್ರೀನಿವಾಸಮೂರ್ತಿ, ಬೆಂಗಳೂರು
ಭೀಮನಕೆರೆ ಕೆಂಪಯ್ಯ, ಮದ್ದೂರು
ಪ್ರೊ.ಶಿವರಾಮಯ್ಯ, ಬೆಂಗಳೂರು
ಡಾ.ವೆಂಕಟರೆಡ್ಡಿ, ದೊಡ್ಡಬಳ್ಳಾಪುರ
ಪ್ರೊ.ಸಿರಿಲ್ ಮಥಾಯಿಸ್, ಉಡುಪಿ
ವೈ.ಜೆ.ರಾಜೇಂದ್ರ, ಬೆಂಗಳೂರು
ಪ್ರೊ.ನಗರಗೆರೆ ರಮೇಶ್, ಬೆಂಗಳೂರು
ಪ್ರೊ.ರಾಮಸ್ವಾಮಿ, ಬೆಂಗಳೂರು
ಪ್ರೊ.ರಂಗಾರೆಡ್ಡಿ ಕೋಡಿರಾಂಪುರ, ಗೌರಿಬಿದನೂರು
ಮುಳ್ಳೂರು ನಾಗರಾಜ್, ಮೈಸೂರು
ಡಾ.ವಿ.ಲಕ್ಷ್ಮೀನಾರಾಯಣ, ಮೈಸೂರು
ಬಸವರಾಜ ಹಾದಿಮನಿ, ಹಾವೇರಿ
ಡಾ.ದಸ್ತಗೀರ್ ಸಾಬರದಿನ್ನಿ, ರಾಯಚೂರು
ಅಪ್ಪಾರಾವ್, ಬಳ್ಳಾರಿ
ದೇವಾನಂದ್ ಜಗಾಪುರ್, ಹುಬ್ಬಳ್ಳಿ
ರಾಜಶೇಖರ ಕೋಟಿ
ಪ್ರೊ.ಮುಜಾಫರ್ ಅಸ್ಸಾದಿ
ಪ್ರೊ.ಗೋವಿಂದಯ್ಯ
ಜಯನ್ ಮಲ್ಪೆ, ಉಡುಪಿ
ಸಿ.ರಾಜನ್, ಬೆಂಗಳೂರು
ಹಾಲಪ್ಪ, ಶಿವಮೊಗ್ಗ

## ರಾಜ್ಯ ಸಂಯೋಜಕರು

**ಕೆ.ಎಲ್.ಅಶೋಕ**
**ಎ.ಎಂ.ಎಂ.ಶಾಫಿ, ಬೆಂಗಳೂರು**
**ಜೆ.ಎಂ.ವೀರಸಂಗಯ್ಯ**
**ಪ್ರೊ.ಮಲ್ಲಿಕಾ ಘಂಟಿ, ಸಂಡೂರು**
**ಪ್ರೊ.ಬಿ.ಗಂಗಾಧರಮೂರ್ತಿ, ಗೌರಿಬಿದನೂರು**
**ಡಾ.ಮ.ಪು.ಪೂರ್ಣಾನಂದ, ಮೈಸೂರು**
**ಮಹಾಲಿಂಗಪ್ಪ ಆಲಬಾಳ, ಬಾಗಲಕೋಟೆ**

## ಸಂಚಾಲಕ ಮಂಡಳಿ

ವಿದ್ಯಾಧರ, ಮಡಿಕೇರಿ
ದಿನಕರ ಬೆಂಗ್ರೆ, ಉಡುಪಿ
ಐಸಾಕ್ ಅರುಳ್ ಸೆಲ್ವ, ಬೆಂಗಳೂರು
ಗುರುಪ್ರಸಾದ್ ಕೆರಗೋಡು, ಮಂಡ್ಯ
ನರಸಿಂಹರೆಡ್ಡಿ, ಬಳ್ಳಾರಿ
ಕ್ರಾಂತಿರಾಜ್, ಮೈಸೂರು
ಮಾರ್ಕಾರೆಡ್ಡಿ, ಬಳ್ಳಾರಿ
ಯು.ಎಚ್.ಉಮರ್, ಮಂಗಳೂರು
ಡಾ.ವಾಸು ಎಚ್.ವಿ, ಮಂಡ್ಯ
ಗೌಸ್ ಮೊಯಿದ್ದೀನ್, ಚಿಕ್ಕಮಗಳೂರು
ಮಂಜುಳ, ಶಿವಮೊಗ್ಗ
ಹರ್ಷಕುಮಾರ್ ಕುಗ್ವೆ, ಶಿವಮೊಗ್ಗ
ಕುಮಾರ್ ಸಮತಳ, ಬೆಂಗಳೂರು
ಎಂ.ಬಿ.ನಾಗಣ್ಣ, ಮಂಡ್ಯ
ವೈ.ಮರಿಸ್ವಾಮಿ, ಬೆಂಗಳೂರು
ಮೊಹ್ಮದ್ ಇಲ್ಯಾಸ್ ತುಂಬೆ, ಮಂಗಳೂರು
ದುಗ್ಗಪ್ಪ ಗೌಡ, ಮೂಡಿಗೆರೆ
ಅಲ್ಲಾರಂಡ ವಿಠಲ ನಂಜಪ್ಪ, ಮಡಿಕೇರಿ
ಕಾರ್ಗಲ್ ಭೋಗರಾಜ್, ಬೆಂಗಳೂರು
ಅಬ್ದುಲ್ ಲತೀಫ್, ಮಂಗಳೂರು
ರಮೇಶ್ ಅಂಕೋಲ
ಗೌರಿ, ಬೆಂಗಳೂರು
ರಾಣಿ, ರಾಮನಗರ
ಪಾರ್ವತೀಶ, ಬೆಂಗಳೂರು
ಎಂ.ಇಸ್ಮಾಯಿಲ್, ಮಂಗಳೂರು
ಲಕ್ಷ್ಮಣ ಮರಡಿತೋಟ, ಬಾದಾಮಿ,
ಕಾಂತರಾಜು ತುಮಕೂರು
ಡಿ.ಎಸ್.ಶಿವಕುಮಾರ್, ಶಿವಮೊಗ್ಗ
ಅನ್ವರ್ ಸಾದತ್, ಮಂಗಳೂರು
ದಯಾಕರ್, ಮೂಡಿಗೆರೆ
ಮಲ್ಲಿಗೆ, ಬೆಂಗಳೂರು
ಶಶಿಕಾಂತ್, ಸುರತ್ಕಲ್
ರಸೂಲ್ ಕಟ್ಪಾಡಿ, ಉಡುಪಿ
ಹಳಿಯಾಳ, ಧಾರವಾಡ

ಎಂ.ಕೆ.ನದಾಫ, ಧಾರವಾಡ
ಸಾಹಿನಾ, ಶಿವಮೊಗ್ಗ
ಹಸನಬ್ಬ, ಮೂಡಿಗೆರೆ
ಎಂ.ಕೆಂಚೇಗೌಡ, ಹೊಸಕೋಟೆ
ಬಸವರಾಜ್ ಹಾದಿಮನಿ, ಹಾವೇರಿ
ಪ್ರಕಾಶ್ ಕೋನಾಪುರ, ಶಿಕಾರಿಪುರ
ರಾಮು ಕೌಳಿ, ಜಯಪುರ
ಎಚ್.ಬಿ.ರಾಘವೇಂದ್ರ, ಸಾಗರ
ವೆಂಕಟೇಶ್, ಹೊಳೆಬೆನ್ನವಳ್ಳಿ
ಅಪೂರ್ವ ಡಿಸಿಲ್ವಾ, ಚಾಮರಾಜನಗರ
ಸಿ.ಎಂ.ನರಸಿಂಹಮೂರ್ತಿ, ಚಾಮರಾಜನಗರ
ಆಲೂರು ನಾಗೇಂದ್ರ, ಚಾಮರಾಜನಗರ
ವೆಂಕಟರಾಜು, ಚಾಮರಾಜನಗರ
ದಾದಾಪೀರ್‌ಕೊಪ್ಪಳ, ಹುಬ್ಬಳ್ಳಿ
ಡಾ.ಎಸ್.ಎ.ಖಾದ್ರಿಹಾಷ್ಮಿ, ಸಿರುಗುಪ್ಪ
ಆವರಗೆರೆ ರುದ್ರಮುನಿ, ದಾವಣಗೆರೆ
ಪಿ.ನರಸಿಂಹಾಚಾರ್, ಮಂಡ್ಯ
ಎಸ್.ಕೃಷ್ಣ, ಮಂಡ್ಯ
ಶಿವಬೋರಯ್ಯ, ಮಂಡ್ಯ
ಕಮ್ಮರಾಜು, ಮಳವಳ್ಳಿ
ಎಂ.ಶಿವಕುಮಾರ್, ಮಳವಳ್ಳಿ
ದೀಪು, ಬೆಂಗಳೂರು
ಮುನಿರಾಜು, ಬೆಳ್ಳೂರು
ಜಗನ್ನಾಥ್, ಮಂಡ್ಯ
ಅಸ್ಗರ್, ದಾವಣಗೆರೆ
ಪಿ.ವಿ.ಮೋಹನ್, ಮಂಗಳೂರು
ಎಸ್.ಎ.ಮರಿಯಪ್ಪ, ಶೃಂಗೇರಿ
ಮೋಹನ್ ಮೈಸೂರು
ಚಂದ್ರಣ್ಣ, ಚಿಕ್ಕಮಗಳೂರು
ರಫೀಕ್ ಕಿರಗುಂದ, ಮೂಡಿಗೆರೆ
ಕೆ.ಎಚ್.ಮುಸ್ಲಿಯಾರ್, ಮೂಡಿಗೆರೆ
ರಮೇಶ್ ಗೌಡ, ಬೆಳ್ಳೂರು
ಸಂತೋಷ್ ಕುಮಾರ್, ಮದ್ದೂರು
ಅಂಬಣ್ಣ ಅರೋಲಿಕರ್, ರಾಯಚೂರು
ಯೋಗಾನಂದ, ಮದ್ದೂರು
ಕೃಷ್ಣಪ್ರಕಾಶ್, ಮಂಡ್ಯ
ನಜೀರ್, ಪಾಂಡವಪುರ
ಯುವರಾಜ್, ಬೆಂಗಳೂರು
ಮೇಘರಾಜ್, ಬಾಗಲಕೋಟೆ
ಹೈದರ್ ಬೇಗ್, ಹೊಸಕೋಟೆ
ಸಂಜನಾ, ಬೆಂಗಳೂರು
ಸರ್ಜಾಶಂಕರ ಹರಳೀಮಠ, ಶಿವಮೊಗ್ಗ
ಅಜೀಜ್ ಕಿರಗುಂದ, ಮೂಡಿಗೆರೆ
ಯೂಸುಫ್ ಹಾಜಿ, ಚಿಕ್ಕಮಗಳೂರು
ಉಗ್ರನರಸಿಂಹೇಗೌಡ, ಮೈಸೂರು
ಮೂಲಿಮನಿ, ರಾಯಚೂರು
ಮಾಸ್ತಿ ಜಗನ್ನಾಥ್, ಬೆಂಗಳೂರು
ಕೆ.ಪಿ.ಶ್ರೀಪಾಲ್, ಶಿವಮೊಗ್ಗ
ಕೃಷ್ಣಮೂರ್ತಿ ಬಿಳಿಗೆರೆ, ತಿಪಟೂರು
ಉಜ್ಜಜ್ಜಿ ರಾಜಣ್ಣ, ತಿಪಟೂರು
ಜನಾರ್ಧನ ಭಂಡಾರ್ಕರ್, ಉಡುಪಿ
ಎಲ್.ಎಂ.ಮುನಿಬೈರಪ್ಪ, ಬೆಂಗಳೂರು
ಅಸ್ಮತ್, ಬಂಗಾರಪೇಟೆ
ಸೆಬಾಸ್ಟಿಯನ್ ದೇವರಾಜ್, ಬೆಂಗಳೂರು
ದಿನೇಶ್ ವಕೀಲರು, ಬೆಂಗಳೂರು
ಶ್ರೀನಿವಾಸ್, ರಾಯಚೂರು
ವೆಂಕಟೇಶಪ್ಪ, ಚಿಕ್ಕನಹಳ್ಳಿ ಹೊಸಕೋಟೆ
ಕಬಸೆ ಅಶೋಕ ಮೂರ್ತಿ, ಸಾಗರ
ಅಬ್ದುಲ್ಲಾ ಹೊಸಪೇಟೆ
ದಾದಾಪೀರ್, ತರೀಕೆರೆ
ರವಿ ಮ.ಪಾಟೀಲ, ಬೆಳಗಾವಿ
ಮದ್ದೂರು ಮಹೇಶ್, ಬೆಂಗಳೂರು
ಮೊಹಮ್ಮದ್ ಕಕ್ಕಿಂಜೆ, ಮಂಗಳೂರು
ರಾಜೇಂದ್ರ, ಭದ್ರಾವತಿ
ರಾಜು ಉಜ್ಜನೀಪುರ, ಭದ್ರಾವತಿ
ಪುಣಜನೂರು ದೊರೆಸ್ವಾಮಿ, ಚಾಮರಾಜನಗರ
ಗೀಕಳ್ಳಿ ಸೋಮಣ್ಣ, ನಂಜನಗೂಡು
ರಾಂಚಂದ್ರ ಕೊಪ್ಪಲು, ತೀರ್ಥಹಳ್ಳಿ
ಮಸ್ತಾನ್, ಸಿಂಧನೂರು
ಖತೀಬ್ ಅಬ್ದುಲ್ ರಷೀದ್, ಉಡುಪಿ

## ಸಹಭಾಗಿ ಸಂಘಟನೆಗಳು

ಕರ್ನಾಟಕ ಕೋಮುಸೌಹಾರ್ದ ವೇದಿಕೆ
ಪಾಪ್ಯುಲರ್ ಫ್ರಂಟ್ ಆಫ್ ಇಂಡಿಯಾ
ಕರ್ನಾಟಕ ಜನಪರ ವೇದಿಕೆ
ಕರ್ನಾಟಕ ರಾಜ್ಯ ರೈತಸಂಘ
ದಲಿತ ಸಂಘರ್ಷ ಸಮಿತಿ
ಸಮತಾ ಸೈನಿಕ ದಳ
ಕರ್ನಾಟಕ ಜನಾಂದೋಲನ ಸಂಘಟನೆ
ಕರ್ನಾಟಕ ರಾಜ್ಯ ದಲಿತ ಸಂಘರ್ಷ ಸಮಿತಿ
ಕರ್ನಾಟಕ ಫೋರಂ ಫಾರ್ ಡಿಗ್ನಿಟಿ
ಪ್ರಜಾ ವಿಮೋಚನಾ ಚಳುವಳಿ
ಕರ್ನಾಟಕ ಕೊಳೆಗೇರಿ ನಿವಾಸಿಗಳ ಜಂಟಿ ಕ್ರಿಯಾ ಸಮಿತಿ
ಪ್ರಜಾತಾಂತ್ರಿಕ ಜನರ ವೇದಿಕೆ
ಕರ್ನಾಟಕ ರಾಜ್ಯ ಹಿಂದುಳಿದ ಜಾತಿಗಳ ಒಕ್ಕೂಟ
ಎಸ್‌ಎಪಿಎಂ-ಕರ್ನಾಟಕ
ಕರ್ನಾಟಕ ರಾಜ್ಯ ಅಲೆಮಾರಿ ಜನಾಂಗಗಳ ಒಕ್ಕೂಟ
ದಲಿತ ಕ್ರೈಸ್ತ ಒಕ್ಕೂಟ, ಬೆಂಗಳೂರು
ಸ್ವಾಭಿಮಾನಿ ದಲಿತ ಶಕ್ತಿ
ಎಚ್‌ಆರ್‌ಎಫ್‌ಡಿಎಲ್-ಕರ್ನಾಟಕ
ಸಮಾನತಾ ಮಹಿಳಾ ವೇದಿಕೆ
'ಲಂಕೇಶ್ ಬಳಗ'
ಪಿಯುಸಿಎಲ್
ಕರ್ನಾಟಕ ರಾಜ್ಯ ದಲಿತ ಸಂಘರ್ಷ ಸಮಿತಿ (ಸಂಯೋಜಕ)
ಪೆಡೆಸ್ಟ್ರಿಯನ್ ಪಿಕ್ಚರ್ಸ್
ಸ್ಪಂದನ, ಚನ್ನಪಟ್ಟಣ
ವಿದ್ಯಾರ್ಥಿ ಹಿತರಕ್ಷಣಾ ವೇದಿಕೆ, ಶಿವಮೊಗ್ಗ
ಹ್ಯೂಮನ್ ರೈಟ್ಸ್ ಲಾ ನೆಟ್‌ವರ್ಕ್ ಬೆಂಗಳೂರು
ಸುನ್ನಿ ಸ್ಟೂಡೆಂಟ್ ಫೆಡರೇಷನ್, ಚಿಕ್ಕಮಗಳೂರು
ಸೌತ್ ಮುಸ್ಲಿಂ ಮೈನಾರಿಟಿ ಯೂತ್ ಕಮಿಟಿ, ಚಿಕ್ಕಮಗಳೂರು
ನಮ್ಮ ಹಕ್ಕು ವೇದಿಕೆ- ಶಿವಮೊಗ್ಗ
ಕರ್ನಾಟಕ ತಮಿಳ್ ಮಕ್ಕಳ್ ಇಯಕ್ಕಂ
ಜನವಿಮೋಚನಾ ವೇದಿಕೆ-ಹೈದ್ರಾಬಾದ್ ಕರ್ನಾಟಕ
ದಸಂಸ ಅಂಬೇಡ್ಕರ್‌ವಾದ, ಬಂಗಾರಪೇಟೆ
ಮೌಲಾನಾ ಅಬ್ದುಲ್ ಕಲಾಂ ಅಜಾದ್ ಯುವಕರ ಕಲ್ಯಾಣ ಸಂಘಟನೆ, ಬಂಗಾರಪೇಟೆ
ಪ್ರಜ್ಞಾರಂಗ, ಸಾಗರ. ವಿವೇಕ ಶಿವಮೊಗ್ಗ

ಜನಾರೋಗ್ಯ ಆಂದೋಲನ, ಬೆಂಗಳೂರು
ಸೋಷಿಯಲ್ ಜಸ್ಟೀಸ್ ಫೋರಂ, ಮಂಗಳೂರು
ರೈಲ್ವೇ ಹೋರಾಟ ಸಮಿತಿ, ಮಂಗಳೂರು
ಕೊಡಗು ಜಿಲ್ಲಾ ಪ್ರಗತಿಪರ ಚಿಂತಕರ ವೇದಿಕೆ, ಮಡಿಕೇರಿ
ಬುಡಕಟ್ಟು ಕೃಷಿಕರ ಸಂಘ, ಕೊಡಗು
ಕೊಡಗು ಜಿಲ್ಲಾ ಆದಿವಾಸಿಗಳ ಸಂಘ, ಕೊಡಗು
ಜಾಗೃತ ವಿದ್ಯಾರ್ಥಿ ಒಕ್ಕೂಟ, ಮಂಡ್ಯ
ಮುಸ್ಲಿಂ ಲೇಖಕರ ಸಂಘ, ಮಂಗಳೂರು
ರಾಜ್ಯ ಬೀಡಿ ಕಾರ್ಮಿಕರ ಸಂಘ, ಬೆಂಗಳೂರು
ಕರ್ನಾಟಕ ರಾಜ್ಯ ಕೂಲಿಕಾರರ ಸಂಘ, ಬೆಂಗಳೂರು
ಕರ್ನಾಟಕ ಮುಸ್ಲಿಂ ಏಕೀಕರಣ ಸಮಿತಿ, ಧಾರವಾಡ
ಸಮುದಾಯ ಸೌಹಾರ್ದ ವೇದಿಕೆ, ಧಾರವಾಡ
ನವಜಾಗೃತಿ ಮಹಿಳಾ ಸಂಘ, ಬೆಂಗಳೂರು
ಬೆಂಗಳೂರು ಇನಿಷಿಯೇಟಿವ್ ಫಾರ್ ಪೀಸ್
ರಾಷ್ಟ್ರವೀರ ಟಿಪ್ಪು ಸುಲ್ತಾನ್ ಯುವ ಮಂಡಳ, ಧಾರವಾಡ
ದಲಿತ ಪ್ರಗತಿಪರ ಚಿಂತನ ವೇದಿಕೆ, ಧಾರವಾಡ
ಬೀದಿವ್ಯಾಪಾರಸ್ಥರ ಹಿತರಕ್ಷಣಾ ವೇದಿಕೆ, ಜಮಖಂಡಿ
ಜನರೂಪಿ ಸಾಂಸ್ಕೃತಿಕ ವೇದಿಕೆ, ರಾಮನಗರ
ಕರ್ನಾಟಕ ರಾಜ್ಯ ರೈತಸಂಘ, ಕುಂಬಾಪುರ ಕಾಲೋನಿ
ಟಿಪ್ಪು ಸುಲ್ತಾನ್ ಯುವಕ ಸಂಘ ಜಮಖಂಡಿ
ಪ್ರಗತಿಪರ ಒಕ್ಕೂಟ, ಬಿಜಾಪುರ
ಕನಕ ಯುವ ಸೇನೆ, ಬಿಜಾಪುರ
ಟಿಪ್ಪು ಸುಲ್ತಾನ್ ಯುವಕ ಸಂಘ, ಬಿಜಾಪುರ
ಟಿಪ್ಪುಸುಲ್ತಾನ್ ಸಂಘರ್ಷ ಸಮಿತಿ, ಬಾಗಲಕೋಟೆ
ವಾಲ್ಮೀಕಿ ನಾಯಕ ಜಾಗೃತ ವೇದಿಕೆ, ಬಾಗಲಕೋಟೆ
ಕರ್ನಾಟಕ ರಾಜ್ಯ ಕನಕ ಯುವ ಸೇನೆ, ಬಾಗಲಕೋಟೆ
ಮಂಡ್ಯ ನಗರ ಸ್ಲಂ ನಿವಾಸಿಗಳ ಒಕ್ಕೂಟ, ಮಂಡ್ಯ
ಮಂಡ್ಯನಗರ ರೈಲ್ವೇ ಗೂಡ್ಸ್ ಶೆಡ್ ಯೂನಿಯನ್, ಮಂಡ್ಯ
ಮಂಡ್ಯನಗರ ಮೂಟೆ ಕಾರ್ಮಿಕರ ಸಂಘ, ಮಂಡ್ಯ
ಮಂಡ್ಯ ಜಿಲ್ಲಾ ಗುತ್ತಿಗೆ ಪೌರ ಕಾರ್ಮಿಕರ ಸಂಘ, ಮಂಡ್ಯ
ಸ್ಪಂದನ, ಮಂಡ್ಯ
ಬೀಡಿ ಕಾರ್ಮಿಕರ ಸಂಘ, ಹೊಸಕೋಟೆ
ಹಮ್‌ದರ್ದ್, ಕಾಮಧೇನು, ಮಹಾಲಕ್ಷ್ಮಿ ಮಹಿಳಾ ಸ್ವಸಹಾಯ ಸಂಘ, ಮುಗಬಾಳ
ಅಂಕೋಲ ಯುವ ಒಕ್ಕೂಟ, ಅಂಕೋಲ
ಗ್ರಾಮ ಅರಣ್ಯಾ ಸಮಿತಿಗಳ ಒಕ್ಕೂಟ, ಅಂಕೋಲ
ಡಾ. ದಿನಕರ ದೇಸಾಯಿ ಜನಪರ ವೇದಿಕೆ, ಅಂಕೋಲ

ತಾಲ್ಲೂಕು ಪುರುಷ ಸ್ವಸಹಾಯ ಸಂಘಗಳ ಒಕ್ಕೂಟ, ಅಂಕೋಲ
ಜನಪರ ಮಹಿಳಾ ವೇದಿಕೆ, ಅಂಕೋಲ
ಗ್ರಾಮೀಣ ಮಹಿಳಾ ಒಕ್ಕೂಟ, ಕೋಲಾರ
ವುಮೆನ್ಸ್ ವಾಯ್ಸ್, ಬೆಂಗಳೂರು
ಉಡುಪಿ ಜಿಲ್ಲಾ ವಿಚಾರವಾದಿ ವೇದಿಕೆ, ಉಡುಪಿ
ಸೌಹಾರ್ದ ವೇದಿಕೆ, ಉಡುಪಿ
ಸಕಾಲ ಪತ್ರಿಕಾ ಬಳಗ, ಮೈಸೂರು
ಅಭಿವ್ಯಕ್ತಿ ಸಾಂಸ್ಕೃತಿಕ ವೇದಿಕೆ, ಬೆಂಗಳೂರು
ಸಿಯೆಡ್ಸ್ ಕಲೆಕ್ಟಿವ್, ಬೆಂಗಳೂರು
ವಿಮೋಚನಾ, ಬೆಂಗಳೂರು
ಫೆಡಿನಾ, ಬೆಂಗಳೂರು
ಜಗಮೆಚ್ಚಿದಮಗ ಡಾ.ರಾಜ್ ಅಭಿಮಾನಿ ಸಂಘ, ಮತ್ತೀಕೆರೆ
ಕರ್ನಾಟಕ ಸಾಮಾಜಿಕ ವೇದಿಕೆ, ಬೆಂಗಳೂರು
ವಿಕ್ರಾಂತ ಕರ್ನಾಟಕ ಪತ್ರಿಕಾ ಬಳಗ, ಬೆಂಗಳೂರು
ದಲಿತ ಸಂಘಟನೆಗಳ ಜಾಗೃತ ವೇದಿಕೆ, ಭದ್ರಾವತಿ
ನಾಗರೀಕರ ಹಕ್ಕುಗಳ ಹೋರಾಟ ಸಮಿತಿ, ಭದ್ರಾವತಿ
ಅಂಬೇಡ್ಕರ್ ಸಂಘರ್ಷ ಸಮಿತಿ, ಭದ್ರಾವತಿ
ತರಕಾರಿ ಗಾಡಿ ವ್ಯಾಪಾರಿಗಳ ಸಂಘ, ಭದ್ರಾವತಿ
ಶಿವನಗರ ಅಭಿವೃದ್ಧಿ ಸಂಘ, ದಾವಣಗೆರೆ
ಜನಪರ ವಿದ್ಯಾರ್ಥಿ ಸಂಘಟನೆ, ದಾವಣಗೆರೆ
ಗುತ್ತಿಗೆ ಪೌರ ಕಾರ್ಮಿಕರ ಸಂಘ, ಮದ್ದೂರು
ನಾಗರಿಕ ಹಿತರಕ್ಷಣಾ ಸಮಿತಿ, ಮದ್ದೂರು
ಟಿಪ್ಪು ಸುಲ್ತಾನ್ ಯುವಕ ಸಂಘ, ದಾವಣಗೆರೆ
ಚಾರ್ಲಿ ಪೈಲ್ವಾನ್ ಆಟೋ ಸ್ಟಾಂಡ್, ದಾವಣಗೆರೆ
ಮುಸ್ಲಿಂ ಪದವೀಧರರ ಸಂಘ, ದಾವಣಗೆರೆ
ಮಹಿಳಾ ಸ್ವ-ಸಹಾಯ ಸಂಘ ಶಿವನಗರ, ದಾವಣಗೆರೆ
ಆಜಾಮ್ ನೌಜವಾನ್ ಕಮಿಟಿ, ದಾವಣಗೆರೆ
ಆಲ್ ನಿಜ಼ಾಮಿಯ ನೌಜಮಾನ್ ಕಮಿಟಿ, ದಾವಣಗೆರೆ
ಮಿರ್ಜಾ ಇಸ್ಮಾಯಿಲ್ ನಗರ ದಾವಣಗೆರೆ
ಕ್ರಿಶ್ಚಿಯನ್ ವೆಲ್‌ಫೇರ್ ಅಸೋಸಿಯೇಷನ್, ದಾವಣಗೆರೆ
ಸಮತಾ ಪ್ರಗತಿಪರ ಮಹಿಳಾ ವೇದಿಕೆ, ಮೈಸೂರು
ಅಹಿಂದ, ನಂಜನಗೂಡು
ಅಹಿಂದ, ಮೈಸೂರು
ಕರ್ನಾಟಕ ದಲಿತ ಸಂಘರ್ಷ ಸಮಿತಿ(ರಿ) ಜಿಲ್ಲಾ ಶಾಖೆ ಉಡುಪಿ
ಪ್ರಗತಿಪರ ಪತ್ರಕರ್ತರ ಸಂಘ, ಉಡುಪಿ
ಹೆಂಗಸರ ಹಕ್ಕಿನ ಸಂಘ
ಕೂತು ಮಾತಾಡೋಣ ವೇದಿಕೆ, ತೀರ್ಥಹಳ್ಳಿ

## ಪ್ರಜಾತಂತ್ರ ವಿರೋಧಿ,
## ಜನವಿರೋಧಿ, ಕೋಮುವಾದಿ
## ಬಿಜೆಪಿಯನ್ನು ಸೋಲಿಸೋಣ.

ಜನಹಿತವನ್ನು ಮೂಲೆಗೆ ತಳ್ಳುತ್ತಾ ಬಂದಿರುವ
ಇತರೆ ಪಕ್ಷಗಳಿಗೆ ಎಚ್ಚರಿಕೆ ನೀಡೋಣ.

ಜನತೆಯ ಪ್ರಣಾಳಿಕೆಗೆ ಬದ್ಧವಾಗಿರುವ ಶರತ್ತಿನ
ಮೇಲೆ ಅರ್ಹ ಅಭ್ಯರ್ಥಿಗಳನ್ನು ಬೆಂಬಲಿಸೋಣ.

ಪ್ರಣಾಳಿಕೆಯ ಅನುಷ್ಠಾನಕ್ಕಾಗಿ
ಜನಾಂದೋಲನವನ್ನು ಜಾರಿಯಲ್ಲಿಡೋಣ.

**ಪ್ರಜಾಪ್ರಭುತ್ವಕ್ಕಾಗಿ**
**ಜನರ ಒಕ್ಕೂಟ**